# ಹಳ್ಳಿಗಾಡಿನ ರೂವಾರಿ

(ಶ್ರೀ ಜಿ.ಮಾದೇಗೌಡರ ವ್ಯಕ್ತಿತ್ವ ಚಿತ್ರಪ್ರಬಂಧ)

ಡಾ॥ ಸಿ.ಪಿ.ನಾಗರಾಜ

ಜಿ.ಮಾದೇಗೌಡ ಸಮಾಜ ಸೇವಾ ಪ್ರತಿಷ್ಠಾನ
ಕಾಳಮುದ್ದನ ದೊಡ್ಡಿ - 571 422
ಮದ್ದೂರು ತಾಲ್ಲೂಕು, ಮಂಡ್ಯ (ಜಿಲ್ಲೆ)

| | |
|---|---|
| ಗ್ರಂಥದ ಹೆಸರು | : ಹಳ್ಳಿಗಾಡಿನ ರೂವಾರಿ |
| ಭಾಷೆ | : ಕನ್ನಡ |
| ಪ್ರಕಾರ | : ವ್ಯಕ್ತಿತ್ವ ಚಿತ್ರಪ್ರಬಂಧ |
| ರಚನೆ | : ಡಾ॥ ಸಿ.ಪಿ.ನಾಗರಾಜ ಎಂ.ಎ., ಪಿಎಚ್.ಡಿ.,<br>ಕನ್ನಡ ಪ್ರಾಧ್ಯಾಪಕ<br>ಭಾರತೀ ಕಾಲೇಜು<br>ಕಾಳಮುದ್ದನ ದೊಡ್ಡಿ - 571 422. |
| ಪ್ರಕಾಶನ | : ಜಿ.ಮಾದೇಗೌಡ ಸಮಾಜ ಸೇವಾ ಪ್ರತಿಷ್ಠಾನ<br>ಕಾಳಮುದ್ದನ ದೊಡ್ಡಿ - 571 422. |
| ಅಕ್ಷರ ಜೋಡಣೆ ಮತ್ತು ಮುದ್ರಣ | : ಮಂಡ್ಯ ಜಿಲ್ಲಾ ಸಹಕಾರಿ ಮುದ್ರಣ ಮತ್ತು ಪ್ರಕಾಶನಾಲಯ ನಿ.,<br>ನಂ.1156, 1ನೇ ಕ್ರಾಸ್,<br>ಅಶೋಕನಗರ,<br>ಮಂಡ್ಯ. - 571 401.<br>ದೂರವಾಣಿ : 222260 |
| ಪ್ರಕಟನೆಯ ವರ್ಷ | : 2004 |
| ಎಷ್ಟನೆಯ ಮುದ್ರಣ | : ದ್ವಿತೀಯ ಮುದ್ರಣ - ಜನಪ್ರಿಯ ಆವೃತ್ತಿ |
| ಪುಟ ಸಂಖ್ಯೆ | : viii + 56 |
| ಪ್ರತಿಗಳ ಸಂಖ್ಯೆ | : 2,000 |
| ಹಕ್ಕು | : ಜಿ.ಮಾದೇಗೌಡ ಸಮಾಜ ಸೇವಾ ಪ್ರತಿಷ್ಠಾನ |
| ಬೆಲೆ | : ಹತ್ತು ರೂಪಾಯಿಗಳು |

# ಮುನ್ನುಡಿ

ಎಂಬತ್ತರ ದಶಕದ ಮಾತು.

ಜಿ.ಮಾದೇಗೌಡರಿಗೆ ಲಘು ಹೃದಯಾಘಾತ ಆಗಿತ್ತು. ವೈದ್ಯಕೀಯ ತಪಾಸಣೆಗೆ ಬೆಂಗಳೂರಿಗೆ ಹೋದರು. ಬಸ್ಸಿನಲ್ಲಿ ಪಯಣ. ದಟ್ಟ ಜನಸಂದಣಿ, ಕೂರಲು ಹಾಗಿರಲಿ, ನಿಲ್ಲಲೂ ಸ್ಥಳ ಇಲ್ಲ. ಗೌಡರ ಆರೋಗ್ಯದ ಸೂಕ್ಷ್ಮತೆಯ ಅರಿವಿದ್ದ ನಾನು ಕೇಳಿದೆ:

"ಬಸ್ಸಿನಲ್ಲಿ ಯಾಕ್ಸಾರ್ ಬರ್ತಿದೀರ?"

"ಕಾರಿಗೆ ದುಡ್ಡೆಲ್ಲಿ ತರ್ಲಿ ?"

ನಾಲ್ಕು ಅವಧಿ ಶಾಸಕರಾಗಿದ್ದು, ಒಂದು ಬೃಹತ್ ಸಂಸ್ಥೆಯ ಒಡೆಯರಾಗಿದ್ದವರಿಂದ ಈ ಪ್ರಶ್ನೆ!

ಸಾರ್ವಜನಿಕ ಹಣ ಅವರಿಗೆ ವಿಷ. ಸಂಸ್ಥೆಯ ಹಣ ವೆಚ್ಚ ಮಾಡುವಾಗ ಕಟ್ಟೆಚ್ಚರ; ಮೈಯೆಲ್ಲಾ ಕಣ್ಣು. ವಿದ್ಯಾ ಸಂಸ್ಥೆಯ ವಾಹನಗಳನ್ನು ಖಾಸಗಿ ಉಪಯೋಗಕ್ಕೆ ಬಳಸಿಕೊಳ್ಳುವುದು ತಮ್ಮ ಹಕ್ಕು ಎಂದು ಭಾವಿಸಿ ಮೆರೆಯುವ 'ಜನನಾಯಕ'ರಿಗೂ ಮಾದೇಗೌಡರಿಗೂ ಎಷ್ಟೊಂದು ಅಂತರ!

ಮಾದೇಗೌಡರ ಈ ದೊಡ್ಡ ಗುಣ ಕುರಿತು ಲಂಕೇಶ್ ಪತ್ರಿಕೆಯಲ್ಲಿ ಲೇಖನ ಬರೆದೆ. ಅದರ ಶೀರ್ಷಿಕೆ: "ಊರು ಉಪಕಾರ ಬಲ್ಲುದೆ, ಹೆಣ ಶೃಂಗಾರ ಬಲ್ಲುದೆ". ಈ ಲೇಖನದ ಬಗ್ಗೆ ಮೈಸೂರಿನ ಪನ್ನ ಗೆಳೆಯ ಪ್ರಸ್ತಾಪಿಸಿದಾಗ ಗೌಡರ ಉತ್ತರ:

"ನಮ್ಮ ಹುಡುಗ ಬರ್ಕಂಡವ್ನೆ!"

ಅದೇ ಲಂಕೇಶ್ ಪತ್ರಿಕೆಯಲ್ಲಿ ಮತ್ತೊಂದು ಲೇಖನ. ಗೌಡರ ಒಂದು 'ದೌರ್ಬಲ್ಯ' ಕುರಿತ ವ್ಯಂಗ್ಯ. ಅವರ ಗಮನಕ್ಕೆ ಅದನ್ನು ಯಾರೋ ತಂದಾಗ ಅವರ ಪ್ರತಿಕ್ರಿಯೆ:

"ಸರಿಯಾಗೇ ಬರ್ದವ್ನಲ್ಲ!"

ಇದು ಗುರುದೇವರಹಳ್ಳಿ ಮಾದೇಗೌಡರ "ಹೊಗಳಿಕೆಗೆ ಹಿಗ್ಗದ, ಜರಿಯುವಿಕೆಗೆ ಕುಗ್ಗದ" ಮೇರು ವ್ಯಕ್ತಿತ್ವ. ಅವರ ನಿಕಟ ಸಂಪರ್ಕ ಹೊಂದಿರುವ ಸಿ.ಪಿ.ನಾಗರಾಜ ಅವರು ಗೌಡರ ಸಾಹಸಗಾಥೆಯನ್ನು ಈ ಕಿರು ಪುಸ್ತಕದಲ್ಲಿ ಯಶಸ್ವಿಯಾಗಿ ಹಿಡಿದಿಟ್ಟಿದ್ದಾರೆ.

"ನೋಡಿ ಮೇಷ್ಟ್ರೆ ....ಹಿಂದೆ ರಾಮ ಕಾಡ್ನಲ್ಲಿ ಬತ್ತಿದ್ದಾಗ ಅವನ ಪಾದ ಸೋಕಿದ ಒಂದು ಕಲ್ಲಿಗೆ ಜೀವ ಬಂದು ....ಹೆಣ್ಣಾಗಿ ಎದ್ದು ಮುಂದುಮುಖನಾಗಿ ನಡೀತಂತಲ್ಲ....ಹಂಗೆ....ನಮ್ಮ ಮಾದೇಗೌಡ್ನ ಕಾಲ್ನಡೇಲಿ ಇಲ್ಲೆಲ್ಲ ಒಳ್ಳೆದಾಯ್ತು" ಎನ್ನುವ ಮುಗ್ಧ ಹಳ್ಳಿಗನ ಮಾತಿನಲ್ಲಿ ಗೌಡರ ಇಡೀ ವ್ಯಕ್ತಿತ್ವ ಹರಳುಗಟ್ಟಿದೆ. ಶ್ರೀರಾಮನ ಪಾದಸ್ಪರ್ಶದಿಂದ ಅಹಲ್ಯೆಗೆ ಶಾಪ ವಿಮೋಚನೆ ಆಯ್ತು. ಮಾದೇಗೌಡರ ಕ್ರಿಯಾಶೀಲತೆಯಿಂದ ಹಳ್ಳಿಗಾಡಿನ ಜನಸಮುದಾಯದ ಅನಕ್ಷರತೆ, ಬಡತನ ತೊಲಗಲು ದಾರಿ ಆಯ್ತು. ಕಾಳಮುದ್ದನ ದೊಡ್ಡಿ ಪುನೀತ ಆಯ್ತು!

ಈ ಸುತ್ತಿನಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ಇಲ್ಲ. ಪ್ರಥಮವಾಗಿ ಆದ್ಯತೆ ನೀಡಿದವರು ಕಾನಕಾನಹಳ್ಳಿಯ ಎಸ್.ಕರಿಯಪ್ಪನವರು. ಅವರು ಸ್ಥಾಪಿಸಿದ ವಿದ್ಯಾ ಸಂಸ್ಥೆ ಕನಕಪುರ ಆಸುಪಾಸಿನವರಿಗೆ ಸೀಮಿತ ಆಗಿರಲಿಲ್ಲ. ಹಳೆಯ ಮೈಸೂರು ರಾಜ್ಯದ ಹಲವು ಗ್ರಾಮಗಳಿಂದ ಶಿಕ್ಷಣ ಅರಸಿ ವಿದ್ಯಾರ್ಥಿಗಳು ಬರುತ್ತಿದ್ದರು. ನಮ್ಮ ಮಂಡ್ಯ ಜಿಲ್ಲೆಯ ಪಾಲು ಹೆಚ್ಚೇ ಇರುತ್ತಿತ್ತು. ಇದರ ನಂತರ ಪ್ರಾರಂಭ ಆದದ್ದು ಕೃಷ್ಣರಾಜಪೇಟೆಯ ಗ್ರಾಮ ಭಾರತಿ ವಿದ್ಯಾಸಂಸ್ಥೆ. ಅದರ ಸಂಸ್ಥಾಪಕರು ಎಸ್.ಎಂ.ಲಿಂಗಪ್ಪ. ನೇರವಾದ ಮಾತಿನ ಇವರು ಜನರ ಬಾಯಲ್ಲಿ 'ವಕ್ರ' ಲಿಂಗಪ್ಪ! ಈ ಇಬ್ಬರು ಮಹನೀಯರೂ ಅವಿವಾಹಿತರೆಂಬುದು ಕುತೂಹಲದ ಸಂಗತಿ. ನಂತರದ ದಿನಗಳಲ್ಲಿ ವಿದ್ಯಾಪಕ್ಷಪಾತಿ ಕೆ.ವಿ.ಶಂಕರಗೌಡರಿಂದ ಜನತಾ ಶಿಕ್ಷಣ ಸಂಸ್ಥೆ ಪ್ರಾರಂಭ. ಉನ್ನತ ಶಿಕ್ಷಣಕ್ಕೆ ಒತ್ತು ನೀಡಿದ ಶಂಕರಗೌಡರು ಪ್ರಾಥಮಿಕ ಶಿಕ್ಷಣವನ್ನು ಕಡೆಗಣಿಸಿದ್ದು ಮಾತ್ರ ವಿಪರ್ಯಾಸ.

ಇದೇ ಪರಂಪರೆಯಲ್ಲಿ ಬೆಳೆದು ಬಂದ ಜಿ.ಮಾದೇಗೌಡರಿಂದ ೧೯೬೨ರಲ್ಲಿ ಭಾರತೀ ಪ್ರೌಢಶಾಲೆ ಪ್ರಾರಂಭ. ಕೇವಲ ೨೬ ಜನರಿಂದ ಪ್ರಾರಂಭಗೊಂಡ ಆ ಸಂಸ್ಥೆ ಈಗ ಹೆಮ್ಮರವಾಗಿ ಬೆಳೆದು ನಿಂತಿದೆ.

ಗ್ರಾಮೀಣ ಮಕ್ಕಳ ವಿದ್ಯಾಭ್ಯಾಸಕ್ಕೆ ಸಮರ್ಪಕ ವಾತಾವರಣದ ಕೊರತೆ. ಅಳಿಕೆಯಂತಹ ದೂರದ ಊರಿಗೆ ಹೋಗಬೇಕು. ದುಬಾರಿ ವೆಚ್ಚ. ಇದನ್ನು ಮನಗಂಡ ಮಾದೇಗೌಡರಿಂದ ವಸತಿ ಶಾಲೆ ಪ್ರಾರಂಭ.

ಕಾಳಮುದ್ದನ ದೊಡ್ಡಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆ ಮಾದೇಗೌಡರ ಸುಂದರ ಕನಸು. ಅದನ್ನು ಸಾಕಾರಗೊಳಿಸಲು ಅವರು ಪಟ್ಟ ಶ್ರಮ; ಸೋಲು ಗೆಲುವಿನ ದೊಂಬರಾಟ; ಇಚ್ಛಾಶಕ್ತಿಯ ಮೆರೆದಾಟ ಇವುಗಳ ಪ್ರಸ್ತಾಪವನ್ನು ಲೇಖಕರು ಉಲ್ಲೇಖಿಸುತ್ತಾ ಗೌಡರ ಒಂದು ವಿಶೇಷ ಅಂಶವನ್ನು ಹೀಗೆ ಗುರುತಿಸಿದ್ದಾರೆ: 'ಸಮುದಾಯದ ಹಿತಕ್ಕಾಗಿ ತಾವು ಕೈಗೊಳ್ಳುವ ಯಾವುದೇ ಉತ್ತಮ ಕಾರ್ಯಕ್ಕಾದರೂ, ಸಮಾಜದ ಎಲ್ಲಾ ವರ್ಗದ ಜನರೊಡನೆ ಕಲೆತು, ಅವರವರ ಶಕ್ತಿ - ಸಾಮರ್ಥ್ಯಗಳಿಗೆ ಅನುಗುಣವಾಗಿ ಯಾವ ಯಾವ ಬಗೆಯ ಸಹಕಾರವನ್ನು ಪಡೆಯಬಹುದೋ, ಅದೆಲ್ಲವನ್ನು ಸಂಗ್ರಹಿಸಿ ಮತ್ತು ಸಂಘಟಿಸಿ ಸಂಸ್ಥೆಗಳನ್ನು ಕಟ್ಟುವ ಮತ್ತು ಮುನ್ನಡೆಸುವ ಕಲೆಗಾರಿಕೆ ಜಿ.ಮಾದೇಗೌಡರಲ್ಲಿದೆ'.

ಕಾರ್ಖಾನೆ ಸ್ಥಾಪನೆಗೆ ಮಾದೇಗೌಡರು ವಿವಿಧ ನಾಯಕರೊಂದಿಗೆ ಮಾಡಿರುವ ಪತ್ರ ವ್ಯವಹಾರ ಅಳವಡಿಕೆ ಈ ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ. ಇವುಗಳ ಅಧ್ಯಯನ ಇಂದಿನ ರಾಜಕಾರಣಿಗಳಿಗೆ ಮಾರ್ಗದರ್ಶಿ ಆಗಬಲ್ಲುದು.

ವೈಚಾರಿಕ ಮನೋಭಾವದ ಮಾದೇಗೌಡರು ಮಠಾಧೀಶರುಗಳಿಗೆ ಅತಿಯಾದ ಮಾನ್ಯತೆ ನೀಡುವವರಲ್ಲ. ದೇವಸ್ಥಾನಗಳು ಜನಸಮುದಾಯದ ಮನದಲ್ಲಿರುವ ಮೌಢ್ಯವನ್ನು ಮತ್ತಷ್ಟು ಹೆಚ್ಚು ಮಾಡುವ ಕೇಂದ್ರಗಳು ಎಂಬ ಅರಿವಿದ್ದೂ

ಹನುಮಂತನಗರದಲ್ಲಿ ಶ್ರೀ ಆತ್ಮಲಿಂಗೇಶ್ವರ ದೇವಸ್ಥಾನ ನಿರ್ಮಿಸಿದ್ದು ಏಕೆ? ಇದಕ್ಕೆ ಮಾದೇಗೌಡರೇ ಹೀಗೆ ಉತ್ತರಿಸಿದ್ದಾರೆ: "ಸಮಾಜದಲ್ಲಿರುವ ಜನರೆಲ್ಲ ಮಹಾಕವಿ ಕುವೆಂಪು ಅವರಂತೆ ವಿಚಾರವಂತರಲ್ಲ. ನಮ್ಮ ಹಳ್ಳಿಗಾಡಿನ ಜನರಲ್ಲಿ ಬಹುತೇಕ ಮಂದಿ ದೇವರ ಬಗ್ಗೆ ಭಕ್ತಿ ಮತ್ತು ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. 'ಆಗಾಗ್ಗೆ ದೇವಸ್ಥಾನಕ್ಕೆ ಬಂದು ದೇವರ ದರ್ಶನ ಮಾಡ್ಕೊಂಡು, ಹಣ್ಣು-ಕಾಯಿ ಮಾಡಿಸ್ಕೊಂಡು, ಕೈಮುಕ್ಕೊಂಡು ಹೋದರೆ....ತಮ್ಮ ಜೀವನದಲ್ಲಿ ಒಳ್ಳೆಯದಾಗುತ್ತೆ, ತಮಗೆ ಒಳ್ಳೆಯ ಬುದ್ಧಿ ಬರುತ್ತೆ, ತಮ್ಮ ಬದುಕಿನಲ್ಲಿ ಬಂದ ಕಷ್ಟಗಳು ಪರಿಹಾರವಾಗ್ತವೆ'.....ಅನ್ನು ಭಾವನೆ ಹಿಂದಿನಿಂದಲೂ ಇದೆ.....ಈಗಲೂ ಇದೆ. ಆದ್ದರಿಂದ ಜನರ ಮನಸ್ಸಿಗೆ ಒಂದು ಸದ್ಗುಣವನ್ನು ಪ್ರೇರಿಸುವಂಥ ಮತ್ತು ನೆಮ್ಮದಿಯನ್ನು ನೀಡುವಂಥ ಒಂದು ಜಾಗ ಇರ್ಲಿ ಅಂತ, ಇಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಿದ್ದೇನೆ."

ಹಿಂದೆ ಗ್ರಾಮಗಳಲ್ಲಿಯೇ ನ್ಯಾಯ ತೀರ್ಮಾನ ಆಗುತ್ತಿತ್ತು. ಕೋರ್ಟು ಕಛೇರಿ ಅಂತ ಅಲೆಯುವ ಸ್ಥಿತಿ ಇರಲಿಲ್ಲ. ಊರ ಮುಂದಿನ ಚಾವಡಿಯಲ್ಲಿಯೋ, ಅರಳಿ ಮರದ ಕೆಳಗೋ ಕುಳಿತು ನ್ಯಾಯ ತೀರ್ಮಾನವನ್ನು ಹಿರಿಯರು ಹೇಳುತ್ತಿದ್ದರು. ಅವರ ಮಾತು ಕಾನೂನು ಆಗಿರುತ್ತಿತ್ತು. ಆತ್ಮಲಿಂಗೇಶ್ವರ ದೇವಾಲಯದ ಪ್ರಾಂಗಣದಲ್ಲಿ ಇಂತಹ ಒಂದು ನ್ಯಾಯದ ಕಟ್ಟೆಯಿದೆ. ಊರಲ್ಲಿ ತಕರಾರು ಬಂದಾಗ ಅಲ್ಲಿಗೆ ಬಂದು, ನ್ಯಾಯ ತೀರ್ಮಾನ ಹೇಳಿ ಹೋಗುವುದು ವಾಡಿಕೆ. ದೇವರ ಸನ್ನಿಧಿಯಲ್ಲಿ ಸುಳ್ಳು ಹೇಳಲಾರರು, ಮೋಸ ಮಾಡಲಾರರು, ತಪ್ಪೆಸಗಲಾರರು ಎಂಬ ನಂಬಿಕೆ.

ಆತ್ಮಲಿಂಗೇಶ್ವರ ದೇವಸ್ಥಾನಕ್ಕೆ ಕರ್ನಾಟಕ ಪ್ರವಾಸೋದ್ಯಮ ಇಲಾಖೆ ಮಾನ್ಯತೆ ಸಿಕ್ಕಿದೆ. ಪರಿಸರವೂ ಆನಂದದಾಯಕವಾಗಿದೆ. ಆದರೆ ಮುಂದೆ ಒಂದು ದಿನ ಯಾವುದೋ ಜರತಾರಿ ಜಗದ್ಗುರು ಬಂದು ವಕ್ಕರಿಸಬಹುದು. ಮಾದೇಗೌಡರ ಆಶಯಗಳನ್ನೆಲ್ಲ ಮೂಲೆಗುಂಪು ಮಾಡಬಹುದು. ಹಾಗಾಗದಂತೆ ಎಚ್ಚರಿಕೆ ವಹಿಸಬೇಕಾಗಿದೆ. ಈ ದೇವಸ್ಥಾನ ಒಂದು ಸಾಂಸ್ಕೃತಿಕ ಕೇಂದ್ರ ಆಗಬೇಕು. ತಿಂಗಳಿಗೆ ಒಮ್ಮೆಯಾದರೂ, ನಿರ್ದಿಷ್ಟ ದಿವಸ, ಸಾಂಸ್ಕೃತಿಕ ಕಾರ್ಯಕ್ರಮ ನಡೆದರೆ ದೇವಸ್ಥಾನ ಸಾರ್ಥಕತೆ ಪಡೆದೀತು.

ಗುರುದೇವರಹಳ್ಳಿ ಮಾದೇಗೌಡರನ್ನು ಕುರಿತ ಈ ಸುಂದರ, ಆತ್ಮೀಯ ಕಿರುಹೊತ್ತಿಗೆಗೆ ಗೆಳೆಯ ಸಿ.ಪಿ.ನಾಗರಾಜ ಮುನ್ನುಡಿ ಬರೆಯಲು ಕೇಳಿದ್ದಾರೆ. ಇದಕ್ಕೆ ನನ್ನ ಜ್ಞಾನಕ್ಕಿಂತ ವಯಸ್ಸೇ ಕಾರಣ. ನಾನು ಮೆಚ್ಚಿದ ರಾಜಕೀಯ ಮುತ್ಸದ್ದಿಯ ಜೀವನದ ಆದರ್ಶಗಳ ಸಾಧನೆಯ ಹೊತ್ತಿಗೆಗೆ ನನ್ನನ್ನು ತೊಡಗಿಸಿಕೊಂಡ ಸಹೃದಯ ಲೇಖಕರಿಗೆ ನಾನು ಕೃತಜ್ಞ.

ಮಂಡ್ಯ. ಎಚ್.ಎಲ್.ಕೇಶವಮೂರ್ತಿ
26-06-2001

# ಲೇಖಕನ ನುಡಿ

ಕಾಳಮುದ್ದನ ದೊಡ್ಡಿಯ ಭಾರತೀ ವಿದ್ಯಾ ಸಂಸ್ಥೆಯ ಬೆಳ್ಳಿಹಬ್ಬವು ೧೯೮೭ರಲ್ಲಿ ನಡೆಯುತ್ತಿದ್ದ ಸಂದರ್ಭದಲ್ಲಿ, ಸ್ಥಳೀಯ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಸಂಬಂಧಪಟ್ಟ ಪತ್ರ ವ್ಯವಹಾರಗಳ ದಾಖಲೆಯನ್ನೊಳಗೊಂಡ ಫೈಲುಗಳನ್ನು ನೋಡುವ ಅವಕಾಶ ಲಭಿಸಿತು. ನೂರಾರು ಪತ್ರಗಳನ್ನು ಓದುತ್ತಾ ಮುಂದುವರಿದಂತೆಲ್ಲಾ ಶ್ರೀ ಜಿ.ಮಾದೇಗೌಡರು ಸುಮಾರು ಹತ್ತು ವರ್ಷಗಳ ಕಾಲ ನಿರಂತರವಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜೊತೆಯಲ್ಲಿ ವ್ಯವಹರಿಸಿ, ತಮ್ಮ ಭಗೀರಥ ಪ್ರಯತ್ನದಿಂದ ಹಳ್ಳಿಗಾಡಿನ ರೈತ ಸಮುದಾಯದ ಹಿತಕ್ಕಾಗಿ ಬೃಹತ್ ಸಕ್ಕರೆ ಕಾರ್ಖಾನೆಯೊಂದನ್ನು ಸ್ಥಾಪಿಸಿರುವ ವಿಷಯ ಮನದಟ್ಟಾಯಿತು. ಈ ಪತ್ರಗಳ ರಾಶಿಯಲ್ಲಿ ಕೆಲವೇ ಪತ್ರಗಳನ್ನು ಆಯ್ದುಕೊಂಡು 'ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಯ ಹಿನ್ನೆಲೆ' ಎಂಬ ಲೇಖನವನ್ನು ರಚಿಸಿದ್ದೇನೆ. ಐತಿಹಾಸಿಕ ದೃಷ್ಟಿಯಿಂದ ಮಹತ್ವವೆನಿಸಿರುವ ಪತ್ರಗಳನ್ನು ಈ ಕೃತಿಯಲ್ಲಿ ಅಳವಡಿಸಿಕೊಳ್ಳಲು ಅನುಮತಿಯನ್ನು ನೀಡಿದ ಜಿ.ಮಾದೇಗೌಡರಿಗೆ ಕೃತಜ್ಞನಾಗಿರುತ್ತೇನೆ.

ಈ ಕೃತಿಯ ಎರಡನೆಯ ಭಾಗದಲ್ಲಿ ಜಿ.ಮಾದೇಗೌಡರ ವ್ಯಕ್ತಿತ್ವದ ಬಗ್ಗೆ ಬೆಳಕನ್ನು ಚೆಲ್ಲುವ ಕೆಲವು ಘಟನೆಗಳನ್ನು ನಿರೂಪಿಸಿದ್ದೇನೆ. ಸಮಾಜದ ಒಳಿತಿಗ್ಗಾಗಿ ಸದುದ್ದೇಶದಿಂದ ಶ್ರಮಿಸಿದ ಸಾರ್ವಜನಿಕ ಕ್ಷೇತ್ರದಲ್ಲಿನ ವ್ಯಕ್ತಿಯೊಬ್ಬರ ಪ್ರಾಮಾಣಿಕವಾದ ನಡೆನುಡಿಗಳು ಶ್ರೀಸಾಮಾನ್ಯರಿಗೆ ತಿಳಿಯುವಂತಾಗಲೆಂಬ ಆಶಯವೇ ಈ ಕೃತಿಯ ರಚನೆಗೆ ಕಾರಣವಾಗಿದೆ.

ಇಂತಹ ಒಂದು ಕೃತಿಯನ್ನು ರಚಿಸಲು ಮೂಲ ಪ್ರೇರಣೆಯನ್ನು ನೀಡಿ, ಮುನ್ನುಡಿಯನ್ನು ಬರೆದು, ನನ್ನ ಬರವಣಿಗೆಯ ಕ್ರಿಯೆಗೆ ಸದಾಕಾಲ ಉತ್ತೇಜನ ನೀಡುತ್ತಿರುವ ಪ್ರೊ॥ ಎಚ್.ಎಲ್.ಕೇಶವಮೂರ್ತಿ ಅವರಿಗೆ ಕೃತಜ್ಞನಾಗಿರುತ್ತೇನೆ.

ಕೃತಿಯ ರಚನೆಯ ಸಂದರ್ಭದಲ್ಲಿ ಉಪಯುಕ್ತವಾದ ಸಲಹೆಗಳನ್ನು ನೀಡಿದ ಶ್ರೀ ಲಿಂಗಣ್ಣ ಬಂಧೂಕರ್ ಅವರಿಗೆ ಮತ್ತು ಇಂಗ್ಲೀಷ್ ಭಾಷೆಯ ಪತ್ರಗಳನ್ನು ಕನ್ನಡ ಭಾಷೆಗೆ ಅನುವಾದ ಮಾಡುವಾಗ ಸಹಕರಿಸಿದ ಪ್ರಿನ್ಸಿಪಾಲರಾದ ಪ್ರೊ॥ ಟಿ.ವಿ.ಹನುಮಪ್ಪನವರಿಗೆ ವಂದನೆಗಳನ್ನು ಅರ್ಪಿಸುತ್ತೇನೆ.

ಜಿ.ಮಾದೇಗೌಡರ ವೈಯಕ್ತಿಕ ಜೀವನದ ವಿವರಗಳನ್ನು ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಮಾಡಿರುವ ಜನಪರ ಕಾರ್ಯಗಳನ್ನು ಸಮಗ್ರವಾಗಿ ತಿಳಿಸುವ; ಮಾದೇಗೌಡರ ಬಗ್ಗೆ ಸಮಕಾಲೀನ ರಾಜಕಾರಣಿಗಳ ಮತ್ತು ಗುರುಹಿರಿಯರ ಅಭಿಪ್ರಾಯಗಳನ್ನು

ಒಳಗೊಂಡಿರುವ; ಮಾದೇಗೌಡರು ಲೋಕಸಭಾ ಸದಸ್ಯರಾಗಿದ್ದ ಅವಧಿಯಲ್ಲಿ 'ಮಂಡ್ಯಜಿಲ್ಲಾ ರೈತರ ಹಿತರಕ್ಷಣಾ ಸಮಿತಿ' ಮತ್ತು 'ಕರ್ನಾಟಕ ಕೃಷ್ಣಾ - ಕಾವೇರಿ ಸಮನ್ವಯ ಸಮಿತಿ'ಯ ಅಧ್ಯಕ್ಷರಾಗಿ ಕರ್ನಾಟಕ ಜಲಾನಯನ ಪ್ರದೇಶದ ಜನಸಮುದಾಯದ ನೀರಿನ ಹಕ್ಕನ್ನು ಸಂರಕ್ಷಿಸುವುದಕ್ಕಾಗಿ ಕರ್ನಾಟಕದ ಸರ್ವಪಕ್ಷಗಳ ರಾಜಕೀಯ ನೇತಾರರನ್ನು ಒಗ್ಗೂಡಿಸಿ ಮತ್ತು ಸಮಾಜದ ಎಲ್ಲಾ ವರ್ಗದ ಜನರನ್ನು ಸಂಘಟಿಸಿ ನಡೆಸಿರುವ ಹೋರಾಟದ ವಿವರಗಳನ್ನು ನಿರೂಪಿಸುವ 'ಅಪರಂಜಿ' ಎಂಬ ಹೆಸರಿನ ಅಭಿನಂದನಾ ಗ್ರಂಥವೊಂದು ಪ್ರಕಟಗೊಂಡಿದೆ. ಈ ಬೃಹತ್ ಗ್ರಂಥದಲ್ಲಿ ನಾಡಿನ ಶಿಕ್ಷಣ ಕ್ಷೇತ್ರದಲ್ಲಿ ಇದುವರೆಗೂ ನಡೆದಿರುವ ಸಾಧನೆಗಳನ್ನು ಮತ್ತು ಪ್ರಸ್ತುತ ಸಂದರ್ಭದಲ್ಲಿ ಕಾಡುತ್ತಿರುವ ಶೈಕ್ಷಣಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಕುರಿತು ಕರ್ನಾಟಕದ ಶಿಕ್ಷಣತಜ್ಞರು ಮತ್ತು ಚಿಂತನಶೀಲರು ಬರೆದಿರುವ ವೈಚಾರಿಕ ಲೇಖನಗಳು ಸಂಕಲಗೊಂಡಿವೆ. ಶ್ರೀ ಜಿ.ಮಾದೇಗೌಡರ ಅಭಿನಂದನಾ ಗ್ರಂಥದ ಪ್ರಧಾನ ಸಂಪಾದಕರು ಡಾ|| ರಾಮೇಗೌಡ (ರಾಗೌ);ಸಂಪಾದಕರು ಶ್ರೀ ಎಚ್.ಬಿಳೀಗೌಡ ಮತ್ತು ಶ್ರೀ ಎಂ.ರಾಮಕೃಷ್ಣ. ಆಸಕ್ತ ಓದುಗರು ಹೆಚ್ಚಿನ ಮಾಹಿತಿಗಾಗಿ 'ಅಪರಂಜಿ' ಗ್ರಂಥವನ್ನು ಅವಲೋಕಿಸಬಹುದು.

ಈ ಪುಟ್ಟ ಕೃತಿಯು ಅತ್ಯಂತ ಸುಂದರವಾಗಿ ಮುದ್ರಣಗೊಳ್ಳಲು ಮಾರ್ಗದರ್ಶನ ನೀಡಿದ ಪ್ರೊ|| ಚಿ. ಶ್ರೀನಿವಾಸರಾಜು ಅವರಿಗೆ ಮತ್ತು ಮಂಡ್ಯ ಜಿಲ್ಲಾ ಸಹಕಾರಿ ಮುದ್ರಣದ ಮತ್ತು ಪ್ರಕಾಶನಾಲಯದ ಅಧ್ಯಕ್ಷರು, ಕಾರ್ಯದರ್ಶಿ ಮತ್ತು ಸಿಬ್ಬಂದಿ ವರ್ಗದವರಿಗೆ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ದಿನಾಂಕ 11 ಜುಲೈ 2001 — *ಸಿ.ಪಿ.ನಾಗರಾಜ*
ಕಾಳಮುದ್ದನ ದೊಡ್ಡಿ.

## ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಸ್ಥಾಪನೆಯ ಹಿನ್ನೆಲೆ

1961ರಲ್ಲಿ ನಡೆದ ಮದ್ದೂರು ತಾಲ್ಲೂಕು ಬೋರ್ಡಿನ ಚುನಾವಣೆಯಲ್ಲಿ ಸ್ಪರ್ಧಿಸಿ, ಬೋರ್ಡಿನ ಸದಸ್ಯರಾಗಿ ಆಯ್ಕೆಗೊಳ್ಳುವುದರ ಮೂಲಕ ಶ್ರೀ ಜಿ.ಮಾದೇಗೌಡರು ಮೊಟ್ಟ ಮೊದಲ ಬಾರಿಗೆ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದರು. ರಾಜಕೀಯ ಕ್ಷೇತ್ರ ಇವರ ಪಾಲಿಗೆ ಒಂದು ಹೊಸ ಬಗೆಯ ಚೈತನ್ಯವನ್ನು ನೀಡಿತ್ತು. ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದ ಮಹಾತ್ಮ ಗಾಂಧೀಜಿಯವರ ಆದರ್ಶಗಳು ಇಂಡಿಯಾ ದೇಶದ ಎಲ್ಲೆಡೆಯಲ್ಲೂ ಕಂಡುಬರುತ್ತಿದ್ದ ಕಾಲ ಅದಾಗಿತ್ತು. ನಾಡಿಗೆ ಸ್ವಾತಂತ್ರ್ಯ ಬಂದ ಪ್ರಾರಂಭದ ದಶಕಗಳಲ್ಲಿ ರಚನಾತ್ಮಕ ಕಾರ್ಯಗಳ ಮೂಲಕ ನಾಡಿನ ಜನತೆಗೆ ಶಿಕ್ಷಣವನ್ನು ನೀಡಿ, ದುಡಿಮೆಯ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಜನಸಮುದಾಯದ ಬಾಳಿನಲ್ಲಿ ಸರ್ವತೋಮುಖ ಪ್ರಗತಿಯನ್ನು ಸಾಧಿಸುವಂತೆ ದುಡಿಯಬೇಕೆಂಬ ಆದರ್ಶದ ಹಂಬಲವನ್ನು ಹೊಂದಿದ್ದ ರಾಜಕಾರಣಿಗಳಲ್ಲಿ ಜಿ.ಮಾದೇಗೌಡರು ಒಬ್ಬರಾಗಿದ್ದರು.

1962ರಲ್ಲಿ ಮೈಸೂರು ರಾಜ್ಯದ ವಿಧಾನ ಸಭೆಗೆ ಮಳವಳ್ಳಿ ಮತ್ತು ಕಿರುಗಾವಲು ಜಂಟಿ ಕ್ಷೇತ್ರದಿಂದ ಕಾಂಗ್ರೆಸ್ ಪಕ್ಷದ ಅಭ್ಯರ್ಥಿಯಾಗಿ ಜಿ.ಮಾದೇಗೌಡರು ಸ್ಪರ್ಧಿಸಿ, ಜಯಶೀಲರಾದರು. ತಾವು ಆಯ್ಕೆಗೊಂಡ ಈ ಕ್ಷೇತ್ರದ ನೂರಾರು ಹಳ್ಳಿಗಳ ಶೈಕ್ಷಣಿಕ ಮತ್ತು ಆರ್ಥಿಕ ಪ್ರಗತಿಗಾಗಿ ಅತ್ಯಂತ ಮಹತ್ತರವಾದ ಎರಡು ಯೋಜನೆಗಳನ್ನು ರೂಪಿಸಿಕೊಂಡರು. ತಮ್ಮ ಈ ಎರಡು ಯೋಜನೆಗಳಿಗೆ ಕಾರ್ಯಕ್ಷೇತ್ರವನ್ನಾಗಿ, ಅಂದು ಕುಗ್ರಾಮವಾಗಿದ್ದ ಕಾಳಮುದ್ದನ ದೊಡ್ಡಿಯನ್ನು ಅಯ್ಕೆ ಮಾಡಿಕೊಂಡರು. ಏಕೆಂದರೆ ಕಾಳಮುದ್ದನ ದೊಡ್ಡಿಯು ಸುತ್ತಮುತ್ತಣ ಹಲವಾರು ಹಳ್ಳಿಗಳಿಗೆ ಕೇಂದ್ರ ಸ್ಥಾನದಲ್ಲಿತ್ತು. ಮದ್ದೂರು-ಮಳವಳ್ಳಿಯ ಪ್ರಮುಖ ರಸ್ತೆಯ ಮಧ್ಯಭಾಗದಲ್ಲಿದ್ದ ಈ ಸ್ಥಳದಲ್ಲಿ ತಾವು ಕೈಗೊಳ್ಳುವ ಕಾರ್ಯಗಳಿಂದ ಜನಸಮುದಾಯದ ಹಿತವನ್ನು ಸಾಧಿಸಬಹುದೆಂಬ ದೃಢ ವಿಶ್ವಾಸ ಇವರಲ್ಲಿತ್ತು.

### ಜಿ.ಮಾದೇಗೌಡರು ರೂಪಿಸಿಕೊಂಡ ಎರಡು ಯೋಜನೆಗಳು

1. ಶತ ಶತಮಾನಗಳಿಂದ ವಿದ್ಯೆಯಿಂದ ವಂಚಿತರಾಗಿದ್ದ ಗ್ರಾಮೀಣ ಸಮುದಾಯದ ಮಕ್ಕಳಿಗೆ ಶ್ರೇಷ್ಠವಾದ ಶಿಕ್ಷಣವನ್ನು ನೀಡುವಂಥ ಭಾರತೀ ವಿದ್ಯಾಸಂಸ್ಥೆಯನ್ನು ಸ್ಥಾಪಿಸುವುದು.

2. ಗ್ರಾಮೀಣ ಪ್ರದೇಶದ ಆರ್ಥಿಕ ಪ್ರಗತಿಗೆ ಶಾಶ್ವತವಾದ ಅಡಿಪಾಯವನ್ನು ಹಾಕಿ, ಗ್ರಾಮೀಣ ಜನತೆಯ ಸರ್ವತೋಮುಖ ಪ್ರಗತಿಗೆ ನೆರವಾಗುವಂಥ ಭಾರತಿ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವುದು. ಭಾರತೀ ವಿದ್ಯಾ ಸಂಸ್ಥೆ ಮತ್ತು ಭಾರತೀ ಸಹಕಾರ

ಸಕ್ಕರೆ ಕಾರ್ಖಾನೆಯ ಸ್ಥಾಪನೆಯಿಂದ ಪರಸ್ಪರ ಪೂರಕವಾದ ಅನೇಕ ಅಭಿವೃದ್ಧಿ ಕಾರ್ಯಗಳ ಯೋಜನೆಗಳನ್ನು ಈ ಕೆಳಕಂಡಂತೆ ಜಿ.ಮಾದೇಗೌಡರು ರೂಪಿಸಿಕೊಂಡರು.

★ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯಿಂದ ಮಳವಳ್ಳಿ ಮತ್ತು ಮದ್ದೂರು ತಾಲ್ಲೂಕಿನ ನೂರಾರು ಹಳ್ಳಿಗಳಲ್ಲಿ ಕಬ್ಬಿನ ವ್ಯವಸಾಯಕ್ಕೆ ಅಧಿಕವಾದ ಪ್ರೋತ್ಸಾಹ ನೀಡುವುದು.

★ ಸಕ್ಕರೆ ಕಾರ್ಖಾನೆ ಸ್ಥಾಪನೆಯಿಂದ ಈ ಭಾಗದ ಗ್ರಾಮೀಣ ಜನತೆಗೆ ಹೆಚ್ಚಿನ ಉದ್ಯೋಗದ ಅವಕಾಶಗಳನ್ನು ಸೃಷ್ಟಿಸುವುದು.

★ ಸಕ್ಕರೆ ಕಾರ್ಖಾನೆಯ ಆದಾಯದಲ್ಲಿ ಸ್ವಲ್ಪ ಭಾಗವನ್ನು ಸಮುದಾಯದ ಅಭಿವೃದ್ಧಿಗಾಗಿ ಕಾಯ್ದಿರಿಸಿ, ಸಂಗ್ರಹಗೊಂಡ ನಿಧಿಯಿಂದ ಮದ್ದೂರು -ಮಳವಳ್ಳಿ -ಕಿರುಗಾವಲು -ಹಲಗೂರು ಮತ್ತು ಮಂಡ್ಯ ತಾಲ್ಲೂಕಿಗೆ ಸೇರಿದ ಈ ಭಾಗದ ಎಲ್ಲಾ ಗ್ರಾಮಗಳಲ್ಲೂ ಸುಸಜ್ಜಿತವಾದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಕಟ್ಟಡಗಳನ್ನು ಕಟ್ಟಿಸುವುದು. ಹಳ್ಳಿಗಾಡಿನ ರಸ್ತೆಗಳನ್ನು ಸಂಚಾರ ಯೋಗ್ಯವನ್ನಾಗಿ ಮಾಡುವುದು. ಅಗತ್ಯವಿರುವ ಕಡೆಗಳಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸ್ಥಾಪನೆ ಮತ್ತು ವಿಸ್ತರಣೆಗಾಗಿ ನೆರವನ್ನು ನೀಡುವುದು. ಹಳ್ಳಿಗಾಡಿನ ಆರ್ಥಿಕ ಸ್ಥಿತಿಗಳನ್ನು ಮತ್ತಷ್ಟು ಉತ್ತಮ ಪಡಿಸುವುದಕ್ಕಾಗಿ ಉಪ -ಕೈಗಾರಿಕೆಗಳ ಸ್ಥಾಪನೆಗೆ ನೆರವು ನೀಡುವುದು.

ಹೀಗೆ ನಾನಾ ಬಗೆಯ ಯೋಜನೆಗಳನ್ನು ರೂಪಿಸಿಕೊಂಡು, ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಮೂಲಕ ಈ ಭಾಗದ ಗ್ರಾಮಾಂತರ ಪ್ರದೇಶದ ಜನತೆಯ ಕೃಷಿ, ಕೈಗಾರಿಕೆ, ಶಿಕ್ಷಣ, ಆರೋಗ್ಯ ಮತ್ತು ಆರ್ಥಿಕ ಪ್ರಗತಿಯನ್ನುಂಟುಮಾಡಬೇಕೆಂಬುದೇ ಜಿ.ಮಾದೇಗೌಡರ ಹೆಬ್ಬಯಕೆಯಾಗಿತ್ತು.

★★★

1959-60 ರಷ್ಟು ಹಿಂದೆಯೇ ಮೈಸೂರು ಸರ್ಕಾರ ನೇಮಿಸಿದ್ದ ಕಬ್ಬು ಬೆಳೆಯ ಅಭಿವೃದ್ಧಿ ಮತ್ತು ಸಕ್ಕರೆ ಉತ್ಪಾದನಾ ಯೋಜನೆಯ ಪರಿಣತ ಸಮಿತಿಯೊಂದು ಮಂಡ್ಯ ಜಿಲ್ಲೆಯಲ್ಲಿನ ಕಬ್ಬು ಬೆಳೆಯುವ ಪ್ರದೇಶಗಳನ್ನು ಸಮೀಕ್ಷೆ ಮಾಡಿ, ಮಂಡ್ಯ ಜಿಲ್ಲೆಯಲ್ಲಿ ಯಥೇಚ್ಛವಾಗಿ ಕಬ್ಬು ಬೆಳೆಯುವುದರಿಂದ, ಈ ಜಿಲ್ಲೆಯಲ್ಲಿ ಮತ್ತೊಂದು ಸಕ್ಕರೆ ಕಾರ್ಖಾನೆಯನ್ನು ಮೂರನೆಯ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪ್ರಾರಂಭಿಸಬಹುದೆಂಬ ವರದಿಯನ್ನು ರಾಜ್ಯ ಸರ್ಕಾರಕ್ಕೆ ನೀಡಿತ್ತು. ಈ ವರದಿಯನ್ನು ಓದಿದ ಕ್ಷಣದಿಂದಲೇ ಜಿ.ಮಾದೇಗೌಡರಿಗೆ ಎಂತಾದರೂ ಮಾಡಿ, ಮದ್ದೂರು ತಾಲ್ಲೂಕಿನಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲೇಬೇಕೆಂಬ ಆಸೆಯು ಬೀಜ ರೂಪದಲ್ಲಿ ಇವರ ಮನದಲ್ಲಿ ನೆಲೆಸಿತು. 1962ರ ವೇಳೆಗೆ ಶಾಸಕರಾಗಿ ಆಯ್ಕೆಗೊಂಡ ಜಿ.ಮಾದೇಗೌಡರಿಗೆ, ಈ ಶಾಸಕ ಪದವಿಯೆಂಬುದು ರೈತ

ಸಮುದಾಯದವರ ಹಿತಕ್ಕಾಗಿ ದುಡಿಯುವ ಒಂದು ಸಾಧನವಾಯಿತು. ಮನದಲ್ಲಿ ಈ ಮೊದಲೇ ಬೀಜರೂಪದಲ್ಲಿ ನೆಲೆಸಿದ್ದ ಸಕ್ಕರೆ ಕಾರ್ಖಾನೆಯ ಸ್ಥಾಪನೆಯ ಆಸೆಯು, ಈಗ ಸ್ವಲ್ಪ ಸ್ವಲ್ಪವಾಗಿ ಮೊಳಕೆ ಒಡೆಯತೊಡಗಿತು.

ಕಾಳಮುದ್ದನ ದೊಡ್ಡಿಯಲ್ಲಿನ ಮದ್ದೂರು-ಮಳವಳ್ಳಿ ರಸ್ತೆಯ ಬಲಬದಿಯಲ್ಲಿ ಭಾರತೀ ವಿದ್ಯಾ ಸಂಸ್ಥೆ ಮತ್ತು ಎಡಬದಿಯಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಕಾರ್ಯಗಳನ್ನು ಪ್ರಾರಂಭಿಸಿದರು.

1962ರ ಜೂನ್ ತಿಂಗಳಿನಲ್ಲಿ ಭಾರತೀ ಪ್ರೌಢಶಾಲೆ ಯನ್ನು ಪ್ರಾರಂಭಿಸಿ, ಈ ಭಾಗದ ಹಳ್ಳಿಗಾಡಿನ ಜನಸಮುದಾಯದ ಶೈಕ್ಷಣಿಕ ಪ್ರಗತಿಗೆ ಅಡಿಗಲ್ಲನ್ನು ಇಟ್ಟರು. ಅಂದು ಕೇವಲ ಇಪ್ಪತ್ತಾರು ವಿದ್ಯಾರ್ಥಿಗಳಿಂದ ಪ್ರಾರಂಭಗೊಂಡ ಭಾರತೀ ವಿದ್ಯಾ ಸಂಸ್ಥೆಯು, ಇಂದು ನಾಲ್ಕು ಸಾವಿರ ವಿದ್ಯಾರ್ಥಿಗಳನ್ನು ಒಳಗೊಂಡಿರುವ ಬೃಹತ್ ಶಿಕ್ಷಣ ಸಂಸ್ಥೆಯಾಗಿ ಬೆಳೆದಿದೆ. ಪ್ರಾಥಮಿಕ ಶಾಲೆ, ಮಾಧ್ಯಮಿಕ ಶಾಲೆ, ಪ್ರೌಢ ಶಾಲೆ, ಪ್ರಥಮ ದರ್ಜೆ ಕಾಲೇಜು, ಪಾಲಿಟೆಕ್ನಿಕ್, ಡಿ.ಫಾರ್ಮ, ಬಿ.ಫಾರ್ಮ ಮತ್ತು ವೃತ್ತಿಶಿಕ್ಷಣ ತರಬೇತಿ ವಿಭಾಗಗಳನ್ನು ಒಳಗೊಂಡು ಗ್ರಾಮಾಂತರ ಪ್ರದೇಶದ ಶೈಕ್ಷಣಿಕ ಪ್ರಗತಿಗೆ ನೆರವಾಗಿದೆ. 1987ರಲ್ಲಿ ಭಾರತೀ ವಿದ್ಯಾ ಸಂಸ್ಥೆಯು ಬೆಳ್ಳಿಹಬ್ಬವನ್ನು ಆಚರಿಸಿದಾಗ, ಈ ಸುತ್ತ ಮುತ್ತಣ ಗ್ರಾಮಾಂತರ ಪ್ರದೇಶದ ಲಕ್ಷಾಂತರ ಮಂದಿ ಶ್ರೀಸಾಮಾನ್ಯರು ನಾಡಹಬ್ಬದಲ್ಲಿ ಭಾಗವಹಿಸಿ ಆನಂದಿಸುವಂತೆ ಭಾರತೀ ವಿದ್ಯಾ ಸಂಸ್ಥೆಯ ಬೆಳವಣಿಗೆ ಮತ್ತು ಮಹತ್ವಪೂರ್ಣವಾದ ಕಾರ್ಯಗಳನ್ನು ಕಂಡು ಸಂತೋಷಪಟ್ಟರು. ಜಿ.ಮಾದೇಗೌಡರ ಉದ್ದೇಶಿತ ಎರಡು ಯೋಜನೆಗಳಲ್ಲಿ ಗ್ರಾಮಾಂತರ ಪ್ರದೇಶದ ಜನತೆಗೆ ಶಿಕ್ಷಣ ನೀಡಬೇಕೆಂಬ ಯೋಜನೆಯು ಸಾರ್ಥಕವಾದ ರೂಪದಲ್ಲಿ ಕೈಗೂಡಿದೆ.

ಜಿ.ಮಾದೇಗೌಡರ ಮತ್ತೊಂದು ಯೋಜನೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆ. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಬೇಕಾದರೆ, ರಾಜ್ಯ ಸರ್ಕಾರದ ಸಂಪೂರ್ಣ ಸಹಕಾರ ಮತ್ತು ಕೇಂದ್ರ ಸರ್ಕಾರದ ಅನುಮತಿಯ ಅಗತ್ಯವಿತ್ತು. ರಾಜ್ಯ ಸರ್ಕಾರದಿಂದ ಅನುಮೋದನೆಯನ್ನು ಪಡೆದು, ಕೇಂದ್ರ ಸರ್ಕಾರದಿಂದ ಅಗತ್ಯವಾದ ಲೈಸನ್ಸ್ ಅನ್ನು ಪಡೆಯುವ ಕಾರ್ಯವು ಅತ್ಯಂತ ಜಟಿಲವಾದುದು ಮತ್ತು ಕಷ್ಟಸಾಧ್ಯವಾದುದು. ಇಂತಹ ಒಂದು ಕಾರ್ಯದಲ್ಲಿ ಮುನ್ನುಗ್ಗಿದ ಜಿ.ಮಾದೇಗೌಡರು ಹೆಜ್ಜೆ ಹೆಜ್ಜೆಗೂ ಅನೇಕ ಅಡೆತಡೆಗಳನ್ನು ಎದುರಿಸಿದರೂ, ದೃಢವಾದ ಚಿತ್ತದಿಂದ ಒಂದೊಂದೇ ಹೆಜ್ಜೆಯನ್ನು ಇಡುತ್ತಾ, ತಮ್ಮ ಗುರಿ ಸಾಧನೆಯವರೆಗೂ ಹೇಗೆ ಶ್ರಮಿಸಿದ್ದಾರೆ ಎಂಬುದನ್ನು ಗಮನಿಸಿದಾಗ, ಸಮಾಜದ ಒಳಿತಿಗಾಗಿ ಸದುದ್ದೇಶದಿಂದ ಶ್ರಮಿಸುವ ಸಾರ್ವಜನಿಕ ವ್ಯಕ್ತಿಯೊಬ್ಬನ ಹೋರಾಟದ ಅತ್ಯುತ್ತಮವಾದ ಜೀವನದ ವಿವರಗಳು ನಮಗೆ ದೊರಕುತ್ತವೆ.

ಮದ್ದೂರು ಮತ್ತು ಮಳವಳ್ಳಿ ತಾಲ್ಲೂಕುಗಳ ಸುಮಾರು ಮೂವತ್ತು ಸಾವಿರ ಎಕರೆಗಳಲ್ಲಿ ಬೆಳೆಯುತ್ತಿದ್ದ ಕಬ್ಬನ್ನು ಅರೆಯುವುದಕ್ಕೆ ಅಗತ್ಯವಾದ ಬೃಹತ್ತಾಗಿರುವ ಸಕ್ಕರೆ ಕಾರ್ಖಾನೆಯ

ಸ್ಥಾಪನೆಗೆ ಜಿ.ಮಾದೇಗೌಡರು ರೂಪುರೇಷೆಗಳನ್ನು 1964ನೆಯ ಇಸವಿಯಲ್ಲಿ ಹಾಕತೊಡಗಿದರು. ದಿನವೊಂದಕ್ಕೆ ಒಂದು ಸಾವಿರದ ಇನ್ನೂರ ಐವತ್ತು ಟನ್‌ಗಳಷ್ಟು ಕಬ್ಬನ್ನು ಅರೆಯುವಂಥ ಅತ್ಯಾಧುನಿಕವಾದ ಬೃಹತ್ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಉದ್ದೇಶವಿಟ್ಟುಕೊಂಡರು. ಇಂಥ ದೊಡ್ಡ ಕಾರ್ಖಾನೆಯ ಸ್ಥಾಪನೆಗೆ ಅಂದು ಎರಡು ಕೋಟಿ ರೂ.ಗಳಷ್ಟು ಬಂಡವಾಳದ ಅಗತ್ಯವಿತ್ತು. ಕಾರ್ಖಾನೆಯನ್ನು ಸ್ಥಾಪಿಸಲು ಅಗತ್ಯವಾದ ಪ್ರದೇಶವನ್ನು ಕಾಳಮುದ್ದನ ದೊಡ್ಡಿಯ ವಿಸ್ತಾರವಾದ ಬಯಲು ಪ್ರದೇಶದಲ್ಲಿ ಆಯ್ಕೆ ಮಾಡಿಕೊಂಡರು. ಕಾರ್ಖಾನೆಗೆ ಅಗತ್ಯವಾದ ನೀರನ್ನು ಮೆಳ್ಳಹಳ್ಳಿಯ ಬಳಿ ಹರಿಯುತ್ತಿರುವ ಹೆಬ್ಬಳ್ಳದಿಂದ ಪಡೆಯಲು ಉದ್ದೇಶಿಸಿದರು. ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಯ ನಿರ್ಮಾಣಕ್ಕೆ ಅಗತ್ಯವಾದ ಎಲ್ಲಾ ಬಗೆಯ ಯೋಜನಾ ವರದಿ ಯನ್ನು (Project Report) ಸಿದ್ಧಪಡಿಸಿ, ಡಿ ಮತ್ತು ಆರ್ 1951ರ ಕೈಗಾರಿಕಾ ಲೈಸನ್ಸ್ ಕಾಯಿದೆಗೆ ಅನುಗುಣವಾಗಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಲೈಸನ್ಸ್ ಅನ್ನು ಕೋರಿ ದಿನಾಂಕ 1-5-1964 ರಂದು ಮೈಸೂರು ರಾಜ್ಯ ಸರ್ಕಾರದ ಮೂಲಕ ಭಾರತ ಕೇಂದ್ರ ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿದರು. ಈ ಅರ್ಜಿಯಲ್ಲಿ ಕಾಳಮುದ್ದನ ದೊಡ್ಡಿಯು ಗ್ರಾಮಾಂತರ ಸಹಕಾರ ಸಕ್ಕರೆ ಕಾರ್ಖಾನೆಯೊಂದರ ಸ್ಥಾಪನೆಗೆ ಎಷ್ಟರ ಮಟ್ಟಿಗೆ ಸೂಕ್ತವಾಗಿದೆ ಎಂಬುದನ್ನು ಅಂಕಿ ಅಂಶಗಳ ಸಮೇತ ನಿರೂಪಣೆ ಮಾಡಿ, ಇಲ್ಲಿ ದೊರೆಯುವ ಸಂಪನ್ಮೂಲಗಳ ವಿವರಗಳನ್ನು ನೀಡಿ, ಈ ಭಾಗದ ರೈತ ಸಮುದಾಯದ ಸರ್ವತೋಮುಖ ಪ್ರಗತಿಗೆ ಸಾಧನವಾಗುವಂಥ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಯ ಸ್ಥಾಪನೆಗೆ ಆದಷ್ಟು ಶೀಘ್ರವಾಗಿ ಲೈಸನ್ಸ್ ನೀಡಬೇಕೆಂದು ಜನ ಸಮುದಾಯದ ಪರವಾಗಿ ಪ್ರಾರ್ಥನೆ ಮಾಡಿಕೊಂಡರು.

ಅತ್ತ ಕೇಂದ್ರ ಸರ್ಕಾರಕ್ಕೆ ಕೈಗಾರಿಕಾ ಲೈಸನ್ಸ್‌ಗಾಗಿ ಅರ್ಜಿ ಸಲ್ಲಿಸಿ, ಇತ್ತ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಹಣಬಲ ಮತ್ತು ಜನಬಲವನ್ನು ಕೇಂದ್ರೀಕರಿಸಲು, ಮಂಡ್ಯ ಜಿಲ್ಲೆಯಲ್ಲಿ ಸುಪ್ರಸಿದ್ಧರಾಗಿದ್ದ ಜನನಾಯಕರನ್ನು ಒಳಗೊಂಡಂತೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಯ ಹೆಸರಿನಲ್ಲಿ ಸಹಕಾರ ಸಂಘವೊಂದನ್ನು ದಿನಾಂಕ 17-9-1964ರಂದ ನೋಂದಣಿ ಮಾಡಿಸಿ, ಈ ಕೆಳಕಂಡ ಮಹನೀಯರನ್ನು, ಸಹಕಾರ ಸಂಸ್ಥೆಯ ಪ್ರವರ್ತಕರನ್ನಾಗಿ ಸಂಘಟಿಸಿದರು.

## ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿಯಮಿತ)
### ಕಾಳಮುದ್ದನ ದೊಡ್ಡಿ.

### ಪ್ರವರ್ತಕರು

ಶ್ರೀಯುತರಾದ___

1. ಕೆ.ವಿ.ಶಂಕರಗೌಡ
2. ಎಂ.ಕೆ.ಶಿವನಂಜಪ್ಪ
3. ಜಿ.ಮಾದೇಗೌಡ
4. ಎಸ್.ಎಂ.ಕೃಷ್ಣ
5. ಎಂ.ಮಂಚೇಗೌಡ
6. ಅಣ್ಣೂರು ಸಿದ್ದೇಗೌಡ
7. ಹೆಚ್.ವಿ.ವೀರೇಗೌಡ
8. ಕೆ.ರಾಜು
9. ಮಲ್ಲಿಕಾರ್ಜುನ ಸ್ವಾಮಿ
10. ಸಿ.ಪಿ.ಸುಬ್ಬೇಗೌಡ
11. ಎಂ.ಎಸ್. ಮರಿಯಪ್ಪ
12. ಎಸ್.ಸಿದ್ದಯ್ಯ
13. ಬಿ.ಜೆ.ಲಿಂಗೇಗೌಡ
14. ಕೆ.ಎಲ್.ಶಿವಲಿಂಗೇಗೌಡ
15. ಹನುಮೇಗೌಡ

ಪ್ರವರ್ತಕರೆಲ್ಲರೂ ಕಾಳಮುದ್ದನ ದೊಡ್ಡಿಯಲ್ಲಿ ಸಭೆ ಸೇರಿ, ಈ ಯೋಜನೆಯ ಮುಖ್ಯ ಶಿಲ್ಪಿಯಾಗಿದ್ದ ಜಿ.ಮಾದೇಗೌಡರನ್ನು ಮುಖ್ಯ ಪ್ರವರ್ತಕರನ್ನಾಗಿ ಆಯ್ಕೆ ಮಾಡಿ, ಮುಂದಿನ ಎಲ್ಲಾ ಕಾರ್ಯಗಳ ನೇತೃತ್ವವನ್ನು ಇವರಿಗೆ ವಹಿಸಿಕೊಟ್ಟರು. 1964ರ ಅವಧಿಯಲ್ಲಿ ರಾಜಕೀಯ ರಂಗದಲ್ಲಿನ ಬೇರೆ ಬೇರೆ ಪಕ್ಷದಲ್ಲಿದ್ದ ಅನೇಕ ವ್ಯಕ್ತಿಗಳನ್ನು ಹೀಗೆ ಒಂದೆಡೆ ಕಲೆಹಾಕಿ, ಗ್ರಾಮೀಣ ಪ್ರದೇಶದ ಆರ್ಥಿಕ ಪ್ರಗತಿಗೆ ಅವರೆಲ್ಲರ ಸಹಕಾರವನ್ನು ಬಯಸಿದ ಜಿ.ಮಾದೇಗೌಡರ ಸದುದ್ದೇಶದ ಹಿನ್ನೆಲೆಯಲ್ಲಿ, ಇವರ ವ್ಯಕ್ತಿತ್ವದ ಒಂದು ವಿಶೇಷ ಅಂಶವನ್ನು ಗುರುತಿಸಬಹುದು. ಸಮುದಾಯದ ಹಿತಕ್ಕಾಗಿ ತಾವು ಕೈಗೊಳ್ಳುವ ಯಾವುದೇ ಉತ್ತಮ ಕಾರ್ಯಕ್ಕಾದರೂ, ಸಮಾಜದ ಎಲ್ಲಾ ವರ್ಗದ ಜನರೊಡನೆ ಕಲೆತು, ಅವರವರ ಶಕ್ತಿ -ಸಾಮರ್ಥ್ಯಗಳಿಗೆ ಅನುಗುಣವಾಗಿ ಯಾವ ಯಾವ ಬಗೆಯ ಸಹಕಾರವನ್ನು ಪಡೆಯಬಹುದೋ, ಅದೆಲ್ಲವನ್ನೂ ಸಂಗ್ರಹಿಸಿ ಮತ್ತು ಸಂಘಟಿಸಿ ಸಂಸ್ಥೆಗಳನ್ನು ಕಟ್ಟುವ ಮತ್ತು ಮುನ್ನಡೆಸುವ ಕಲೆಗಾರಿಕೆ ಜಿ.ಮಾದೇಗೌಡರಲ್ಲಿದೆ. ತಾವು ಕೈಗೊಂಡ ಕಾರ್ಯವನ್ನು ತುದಿ ಮುಟ್ಟುವ ತನಕ, ಅದನ್ನೇ ಕುರಿತು ಚಿಂತಿಸುವ, ಅದಕ್ಕಾಗಿ ದೃಢ ಮನಸ್ಸಿನಿಂದ ಮನ್ನುಗ್ಗುವ, ಯಾವುದೇ ಹಂತದಲ್ಲೂ ಹಿಂಜರಿಯದ ಪ್ರವೃತ್ತಿ ಇವರ ವ್ಯಕ್ತಿತ್ವದ ಪ್ರಮುಖ ಅಂಶಗಳಾಗಿವೆ.

ಮುಖ್ಯ ಪ್ರವರ್ತಕರಾಗಿ ಆಯ್ಕೆಗೊಂಡ ಜಿ.ಮಾದೇಗೌಡರು ಈಗಾಗಲೇ ದಿನಾಂಕ 1-5-1964ರಲ್ಲಿಯೇ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಲೈಸೆನ್ಸ್‌ಗಾಗಿ ಸಲ್ಲಿಸಿದ್ದ ಅರ್ಜಿಯ ಬಗೆಗೆ ಆದ್ಯ ಗಮನ ಹರಿಸಿದರು. ರಾಜ್ಯ ಸರ್ಕಾರಕ್ಕೆ ಕಾಳಮುದ್ದನ ದೊಡ್ಡಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯ ಅಗತ್ಯವನ್ನು ಸಮರ್ಥವಾಗಿ ಮನವರಿಕೆ

ಮಾಡಿಕೊಟ್ಟರು. ಆದ್ದರಿಂದಲೇ ಈ ಅರ್ಜಿಯ ಬಗ್ಗೆ ರಾಜ್ಯ ಸರ್ಕಾರದ ಅಭಿಪ್ರಾಯ ಮತ್ತು ಅನುಮೋದನೆಯನ್ನು ಕೇಳಿ ವಿಚಾರಣಾ ಪತ್ರವನ್ನು ಬರೆದಿದ್ದ ಕೇಂದ್ರ ಸರ್ಕಾರಕ್ಕೆ ದಿನಾಂಕ 25-9-1964ರಂದು ಮೈಸೂರು ರಾಜ್ಯ ಸರ್ಕಾರದ ವತಿಯಿಂದ ಅಂದಿನ ಮುಖ್ಯಮಂತ್ರಿಗಳಾದ ಶ್ರೀ ಎಸ್.ನಿಜಲಿಂಗಪ್ಪನವರು ಉತ್ತರ ಬರೆದು, ಕಾಳಮುದ್ದನ ದೊಡ್ಡಿಯ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ತಮ್ಮ ಸಂಪೂರ್ಣ ಸಮ್ಮತಿಯನ್ನು ನೀಡಿ, ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಕೈಗಾರಿಕಾ ಲೈಸನ್ಸ್ ಅನ್ನು ಆದಷ್ಟು ಶೀಘ್ರವಾಗಿ ನೀಡಬೇಕೆಂದು ಪ್ರಾರ್ಥಿಸಿಕೊಂಡರು.

ಈ ರೀತಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಜೊತೆಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅಗತ್ಯವಾದ ಲೈಸನ್ಸ್ ಬಗ್ಗೆ ಪತ್ರ ವ್ಯವಹಾರವನ್ನು ನಡೆಸುತ್ತಿದ್ದಂತೆಯೇ, ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಬಂಡವಾಳವನ್ನು ಸಂಗ್ರಹಿಸಲೆಂದು ಕಾಳಮುದ್ದನ ದೊಡ್ಡಿಯ ಸುತ್ತಮುತ್ತಣ ನೂರಾರು ಗ್ರಾಮಗಳಲ್ಲಿ ರೈತಾಪಿ ಜನಗಳಿಂದ ಷೇರು ಸಂಗ್ರಹಣೆ ಮಾಡಲು ಜಿ.ಮಾದೇಗೌಡರು ಇನ್ನಿತರ ಪ್ರವರ್ತಕರೊಡನೆ ಸಂಚಾರ ಕೈಗೊಂಡರು. 1964ರ ಅವಧಿಯಲ್ಲಿ ಮಳೆಯ ಪ್ರಮಾಣ ಬಹಳ ಕಡಿಮೆಯಾಗಿ, ಬೆಳೆಗಳ ಇಳುವರಿ ಕುಂಠಿತಗೊಂಡು, ರೈತರು ಹಣದ ತೀವ್ರ ಮುಗ್ಗಟ್ಟಿಗೆ ಒಳಗಾಗಿದ್ದರು. ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ರೈತ ಸಮುದಾಯವನ್ನು ಕಾಡಿ - ಬೇಡಿ, ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯಿಂದ ರೈತರಿಗೆ ಉಂಟಾಗುವ ಬಹು ಬಗೆಯ ಪ್ರಯೋಜನಗಳನ್ನು ಮನಮುಟ್ಟುವಂತೆ ವಿವರಿಸಿದರೂ, ಕೇವಲ ಒಂದೂವರೆ ಲಕ್ಷ ರೂಪಾಯಿಗಳು ಷೇರು ಹಣವಾಗಿ ಸಂಗ್ರಹವಾಯಿತು.

ಉದ್ದೇಶಿತ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾಗಿದ್ದ ಬಂಡವಾಳ ಎರಡು ಕೋಟಿ ರೂಪಾಯಿಗಳು. ಆದರೆ ಈಗ ರೈತರಿಂದ ಸಂಗ್ರಹಿತವಾದ ಷೇರು ಹಣ ಕೇವಲ ಒಂದೂವರೆ ಲಕ್ಷ ರೂಪಾಯಿಗಳು. ಇದರಿಂದ ಜಿ.ಮಾದೇಗೌಡರು ಹತಾಶರಾಗಲಿಲ್ಲ. ಸಂಗ್ರಹಿತವಾಗಿದ್ದ ಈ ಹಣವನ್ನು ಮಂಡ್ಯ ನಗರದ ಡಿ.ಸಿ.ಸಿ.ಬ್ಯಾಂಕಿನಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ಫಿಕ್ಸೆಡ್ ಡಿಪಾಸಿಟ್‌ನಲ್ಲಿ ಇಟ್ಟು, ಅಗತ್ಯವಾದ ಬೃಹತ್ ಬಂಡವಾಳ ಸಂಗ್ರಹಣೆಗೆ ಈ ಕೆಳಕಂಡಂತೆ ಯೋಜನೆಯನ್ನು ಹಾಕಿಕೊಂಡರು.

1. ಮಂಡ್ಯ ಜಿಲ್ಲೆಯ ಡಿ.ಸಿ.ಸಿ.ಬ್ಯಾಂಕ್ ;
   ಮೈಸೂರು ರಾಜ್ಯದ ಅಪೆಕ್ಸ್ ಬ್ಯಾಂಕ್;
   ಮಂಡ್ಯ ಜಿಲ್ಲೆಯಲ್ಲಿ ನೆಲೆಗೊಂಡಿದ್ದ ಎರಡು ಸಕ್ಕರೆ ಕಾರ್ಖಾನೆಗಳಾದ ಮಂಡ್ಯ ನಗರದಲ್ಲಿದ್ದ ಮೈಷುಗರ್ ಕಂಪನಿ ಮತ್ತು ಪಾಂಡವಪುರ ಸಹಕಾರ ಸಕ್ಕರೆ ಕಾರ್ಖಾನೆಗಳ ವತಿಯಿಂದ ಸಾಲ ಸೌಲಭ್ಯದ ರೂಪದಲ್ಲಿ ಒಟ್ಟು ಐವತ್ತು ಲಕ್ಷ ರೂ.ಗಳ ಆರ್ಥಿಕ ನೆರವನ್ನು ಪಡೆಯುವುದು.

2 ಮೈಸೂರು ರಾಜ್ಯ ಸರ್ಕಾರದ ವತಿಯಿಂದ ಗ್ರಾಮಾಂತರ ಪ್ರದೇಶವಾದ ಕಾಳಮುದ್ದನ

ದೊಡ್ಡಿಯಲ್ಲಿ ಸ್ಥಾಪನೆಯಾಗಲಿರುವ ಸಹಕಾರ ಕಾರ್ಖಾನೆಗೆ ಐವತ್ತು ಲಕ್ಷ ರೂ.ಗಳ ಸಹಾಯಧನವನ್ನು ಪಡೆಯುವುದು.

3. ಕೇಂದ್ರ ಸರ್ಕಾರದ ಅಧೀನದಲ್ಲಿರುವ ಹಣಕಾಸು ನಿಗಮಗಳಾದ
ಭಾರತೀಯ ಜೀವ ವಿಮಾ ನಿಗಮ (L.I.C., Life Insurance Corporation);
ಭಾರತೀಯ ಕೈಗಾರಿಕಾ ಹಣಕಾಸು ನಿಗಮ.
(I.F.C., Industrial Finance Corporation of India);
ಭಾರತ ಸರ್ಕಾರದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್
(I.D.B.I., Industrial Development Bank of India)

- ಸಂಸ್ಥೆಗಳಿಂದ ಭಾರತೀ ಸಹಕಾರ ಸಕ್ಕರ ಕಾರ್ಖಾನೆಯ ಸ್ಥಾಪನೆಗೆ ಒಂದು ಕೋಟಿ ರೂ.ಗಳ ಸಾಲ ಸೌಲಭ್ಯವನ್ನು ಪಡೆಯುವುದು.

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಇಷ್ಟು ದೊಡ್ಡ ಮೊತ್ತದ ಬಂಡವಾಳವನ್ನು ಜೊತೆಗೂಡಿಸಲು ಪ್ರತಿ ದಿನವೂ ಹತ್ತಾರು ಬಗೆಗಳಲ್ಲಿ ಮೇಲ್ಕಂಡ ಎಲ್ಲಾ ಸಂಘ-ಸಂಸ್ಥೆಗಳ ಜೊತೆ ಪತ್ರ ವ್ಯವಹಾರವನ್ನು ನಿರಂತರವಾಗಿ ನಡೆಸತೊಡಗಿದರು. ಬಂಡವಾಳ ಸಂಗ್ರಹಣೆಗಾಗಿ ಜಿ.ಮಾದೇಗೌಡರು ನಡೆಸಿದ ನೂರಾರು ಪತ್ರಗಳು ಇಂದಿಗೂ ದಾಖಲೆಗಳಾಗಿ ಇವರ ಪತ್ರ ಭಂಡಾರದಲ್ಲಿವೆ.

ಈ ಮಧ್ಯೆ 1965ರ ಸೆಪ್ಟಂಬರ್‌ನಲ್ಲಿ ಕೇಂದ್ರ ಸರ್ಕಾರದಲ್ಲಿ ಹಣಕಾಸಿನ ಸಚಿವರಾಗಿದ್ದ ಶ್ರೀ ಟಿ.ಟಿ.ಕೃಷ್ಣಮಾಚಾರಿ ಅವರು ಮತ್ತು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಶ್ರೀ ಅಶೋಕ ಮೆಹ್ತಾ ಅವರು ಮಂಡ್ಯಕ್ಕೆ ಭೇಟಿ ನೀಡಿದರು. ಆಗ ಅವರಿಗೆ ಮಂಡ್ಯ ಜಿಲ್ಲೆಯಲ್ಲಿ ಲಭಿಸುವ ಕೃಷಿ ಸಂಪನ್ಮೂಲಗಳನ್ನು ಮತ್ತು ಕೃಷಿ ಸಂಬಂಧಿತ ಆರ್ಥಿಕ ಚಟುವಟಿಕೆಗಳನ್ನು ಮನದಟ್ಟು ಮಾಡಿಕೊಡಲಾಯಿತು. ಇಲ್ಲಿನ ಆಧುನಿಕ ವ್ಯವಸಾಯ ಪದ್ಧತಿ, ಸಹಕಾರ ಸಂಘಗಳ ವ್ಯವಸ್ಥಿತವಾದ ಕ್ರಿಯಾಶೀಲತೆ ಮತ್ತು ಕೈಗಾರಿಕಾ ಅಭಿವೃದ್ಧಿಯನ್ನು ಕಂಡು, ಸನ್ಮಾನ್ಯ ಅತಿಥಿಗಳಿಬ್ಬರೂ ಬಹಳವಾಗಿ ಮೆಚ್ಚಿಕೊಂಡರು. ಮುಂದಿನ ಪಾರ್ಲಿಮೆಂಟ್ ಅಧಿವೇಶನದಲ್ಲಿ ಹಣಕಾಸು ಸಚಿವ ಶ್ರೀ ಟಿ.ಟಿ.ಕೃಷ್ಣಮಾಚಾರಿ ಅವರು ತಮ್ಮ ಮೆಚ್ಚುಗೆಯನ್ನು ಈ ರೀತಿ ವ್ಯಕ್ತಪಡಿಸಿದರು.

> "ಮಂಡ್ಯದಲ್ಲಿ ಕೈಗೊಂಡಿರುವ ಆಧುನಿಕ ಕೃಷಿ ಅಭಿವೃದ್ಧಿಯು ಅತ್ಯಂತ ಮಹತ್ವಪೂರ್ಣವಾಗಿದೆ. ಇದೇ ರೀತಿಯ ಅಭಿವೃದ್ಧಿಶೀಲ ಕಾರ್ಯಕ್ರಮಗಳನ್ನು ನಾವು ನಾಲ್ಕನೆಯ ಯೋಜನೆಯಲ್ಲಿ ಅಳವಡಿಸಿಕೊಂಡರೆ, ಭಾರತದ ಉದ್ದಗಲಗಳಲ್ಲಿ ಅನೇಕ ಮಂಡ್ಯಗಳನ್ನು ದ್ವಿಗುಣಗೊಳಿಸಬಹುದು."

ಕೇಂದ್ರ ಸರ್ಕಾರದ ವರಿಷ್ಠರು ನೀಡಿದ ಈ ಹೇಳಿಯನ್ನು ಜಿ.ಮಾದೇಗೌಡರು

ಪ್ರಮುಖವಾಗಿ ಪ್ರತಿಪಾದಿಸುತ್ತಾ, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕಾಳಮುದ್ದನ ದೊಡ್ಡಿಯಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಯ ಅಗತ್ಯದ ಬಗ್ಗೆ ಕೇಂದ್ರ ಸರ್ಕಾರದ ಮೇಲೆ ಮತ್ತಷ್ಟು ಒತ್ತಡ ತಂದು, ಆದಷ್ಟು ಬೇಗ ಕೈಗಾರಿಕಾ ಲೈಸನ್ಸ್ ಪಡೆಯಲು ಪ್ರಯತ್ನಿಸಿದರು.

ಇವರ ನಿರಂತರ ಪ್ರಯತ್ನಕ್ಕೆ ಮೊದಲ ಉತ್ತರವಾಗಿ ಕೇಂದ್ರ ಸರ್ಕಾರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿದ್ದ ಶ್ರೀ ಸುಬ್ರಹ್ಮಣ್ಯಂ ಅವರಿಂದ ದಿನಾಂಕ 8-11-1965ರಂದು ಒಂದು ಪತ್ರ ಜಿ.ಮಾದೇಗೌಡರಿಗೆ ಬರುತ್ತದೆ.

---

## ಪತ್ರ - 1

ನಂ. ಎಫ್ 25 (450) 64 ಎಸ್.ಟಿ./ಎಮ್.ಎಫ್.ಎ/ವಿ.ಐ.ಪಿ./2676/65

ಆಹಾರ ಮತ್ತು ಕೃಷಿ ಮಂತ್ರಿ
ಭಾರತ ಸರ್ಕಾರ
ಹೊಸ ದೆಹಲಿ
8-ನವೆಂಬರ್ - 1965

ಪ್ರಿಯ ಶ್ರೀ ಮಾದೇಗೌಡ,

ಮೈಸೂರು ರಾಜ್ಯದ, ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ, ಕೆ.ಎಂ.ದೊಡ್ಡಿಯಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಬಗ್ಗೆ ತಾವು ದಿನಾಂಕ 29. ಅಕ್ಟೋಬರ್ 1965ರಂದು ಸಲ್ಲಿಸಿರುವ ಪತ್ರವನ್ನು ಪರಾಮರ್ಶಿಸಲಾಗಿದೆ. ಹೊಸ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಮುನ್ನ, ರಾಜ್ಯ ಸರ್ಕಾರದಿಂದ ಸಂಗ್ರಹಿಸಲ್ಪಟ್ಟಿರುವ ಮಾಹಿತಿಗಳನ್ನು ವಿಶ್ಲೇಷಿಸಲು ನೇಮಿಸಲ್ಪಟ್ಟಿರುವ ಪರಿಶೀಲನಾ ಸಮಿತಿಯ ಮುಂದೆ, ತಮ್ಮ ಅರ್ಜಿಯನ್ನು ಪರಿಶೀಲಿಸಲಾಗುತ್ತದೆ. ಕೆ.ಎಂ.ದೊಡ್ಡಿಯ ಅರ್ಜಿಯನ್ನು ಬಾಕಿ ಉಳಿದಿರುವ ಇತರ ಅರ್ಜಿಗಳೊಡನೆ ಗಮನಿಸಲಾಗುತ್ತದೆ.

ತಮ್ಮ ವಿಶ್ವಾಸಿ,
ಸಿ.ಸುಬ್ರಹ್ಮಣ್ಯಂ

ಶ್ರೀ ಜಿ. ಮಾದೇಗೌಡ
ಚೀಫ್ ಪ್ರಮೋಟರ್
ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ.)
ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು, ಮೈಸೂರು ರಾಜ್ಯ.



No F. 25(450)/64 ST/MFA/VII/2606/65

MINISTER FOR FOOD & AGRICULTURE.
GOVERNMENT OF INDIA.

New Delhi,
8th November '65
10

Dear Shri Made Gowda,

Please refer to your letter dated October 29, 1965 regarding the establishment of a co-operative sugar factory at K.M. Doddi, Maddur taluk in district Mandya of Mysore State. I am getting the application processed through the Screening Committee appointed to scrutinise applications for the establishment of new sugar factories in the light of the data received from the State Government. The case of Doddi will be considered along with other pending cases.

Yours sincerely,
C. Subramaniam
(C.Subramaniam)

Shri G. Made Gowda,
Chief Promoter,
Bharathi Sahakara Sakkare Karkhane Ltd.,
K.M. Doddi, Maddur Taluk,
Mysore State.

---

"ಅರ್ಜಿಯನ್ನು ಪರಿಶೀಲಿಸಲಾಗುತ್ತದೆ" ಎಂಬ ಸೂಚನೆಯನ್ನು ಕೇಂದ್ರದಿಂದ ಪಡೆದ ಕ್ಷಣದಿಂದ ಜಿ.ಮಾದೇಗೌಡರು ತಮ್ಮ ಪ್ರಯತ್ನವನ್ನು ಮತ್ತಷ್ಟು ತೀವ್ರಗೊಳಿಸಿದರು. ತಮ್ಮ ಉದ್ದೇಶ ಸಾಧನೆಗಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಹಾಗೂ ರಾಜಕೀಯ ರಂಗದಲ್ಲಿ ಖ್ಯಾತರಾಗಿದ್ದ ಎಲ್ಲಾ ಸಚಿವರ ಮತ್ತು ರಾಜಕೀಯ ಮುಖಂಡರ ಜೊತೆ ಸಂಪರ್ಕವನ್ನು ಬೆಳೆಸಿಕೊಂಡರು. ಪ್ರತಿಯೊಬ್ಬರಿಗೂ ಮಂಡ್ಯ ಜಿಲ್ಲೆಯ ಕೆ.ಎಂ.ದೊಡ್ಡಿಯ ಗ್ರಾಮಾಂತರ ಪ್ರದೇಶದಲ್ಲಿ ಸ್ಥಾಪನೆಗೊಳ್ಳಬೇಕಾದ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಅಗತ್ಯವನ್ನು ಮನಗಾಣಿಸಿದರು. ಮದ್ದೂರು ಮತ್ತು ಮಳವಳ್ಳಿ ತಾಲ್ಲೂಕುಗಳಲ್ಲಿ ಯಾವುದೇ ಬಗೆಯ ಸಣ್ಣ

ಪ್ರಮಾಣದ ಅಥವಾ ದೊಡ್ಡ ಪ್ರಮಾಣದ ಸಕ್ಕರೆ ಕಾರ್ಖಾನೆಗಳು ಇಲ್ಲದಿರುವುದನ್ನು ಅಧಿಕಾರದಲ್ಲಿದ್ದವರ ಗಮನಕ್ಕೆ ತಂದು, ದೇಶದ ದೃಷ್ಟಿಯಿಂದ ಸಕ್ಕರೆ ಉತ್ಪಾದನೆಯನ್ನು ಅಭಿವೃದ್ಧಿ ಪಡಿಸುವುದಕ್ಕಾಗಿ ಮತ್ತು ಈ ಭಾಗದ ಕಬ್ಬು ಬೆಳೆಗಾರರ ಆರ್ಥಿಕ ಮುನ್ನಡೆಗಾಗಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯು ತುಂಬಾ ಅಗತ್ಯವೆಂಬುದನ್ನು ಅಂಕಿ ಅಂಶಗಳ ಮೂಲಕ ಪ್ರತಿಪಾದಿಸಿದರು.

ಅಂದು ಮಂಡ್ಯ ಜಿಲ್ಲೆಯನ್ನು ಪ್ರತಿಪಾದಿಸುತ್ತಿದ್ದ ಲೋಕಸಭಾ ಸದಸ್ಯರಾಗಿದ್ದ ಶ್ರೀ ಎಂ.ಕೆ.ಶಿವನಂಜಪ್ಪನವರಿಂದ ಕೇಂದ್ರದಲ್ಲಿ ಆಹಾರ ಮತ್ತು ಕೃಷಿ ಸಚಿವರಾಗಿದ್ದ ಶ್ರೀ ಸುಬ್ರಹ್ಮಣ್ಯಂ ಅವರಿಗೆ ಸುದೀರ್ಘವಾದ ಒಂದು ಪತ್ರವನ್ನು ಈ ಸಂಬಂಧವಾಗಿ ಬರೆಸುತ್ತಾರೆ. ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಪ್ರವರ್ತಕರಲ್ಲಿ ಒಬ್ಬರಾಗಿದ್ದ ಎಂ.ಕೆ.ಶಿವನಂಜಪ್ಪನವರು ಈ ಗ್ರಾಮಾಂತರ ಪ್ರದೇಶದ ರೈತ ಸಮುದಾಯದ ಸರ್ವಾಂಗೀಣ ಪ್ರಗತಿಗೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಯು ತೀರಾ ಅನಿವಾರ್ಯವೆಂಬುದನ್ನು ತಮ್ಮ ಪತ್ರದಲ್ಲಿ ಪ್ರತಿಪಾದಿಸಿ ಆದಷ್ಟು ಶೀಘ್ರವಾಗಿ ಕೈಗಾರಿಕಾ ಲೈಸನ್ಸ್ ಅನ್ನು ನೀಡುವಂತೆ ಒತ್ತಾಯಿಸುತ್ತಾರೆ. ಎಂ.ಕೆ.ಶಿವನಂಜಪ್ಪನವರ ಪತ್ರಕ್ಕೆ ಕೇಂದ್ರ ಸಚಿವರು ಈ ಕೆಳಕಂಡಂತೆ ಉತ್ತರ ನೀಡುತ್ತಾರೆ.

---

## ಪತ್ರ - 2

ಡಿ.ಓ.ನಂ.ಎಫ್.25/450/64 -ಎಸ್.ಟಿ.

ಎಂ.ಎಫ್.ಎ/ವಿ.ಐ.ಪಿ./316/66

ಆಹಾರ ಮತ್ತು ಕೃಷಿ ಸಚಿವರು
ಭಾರತ ಸರ್ಕಾರ
ನವ ದೆಹಲಿ
3-ಮಾರ್ಚ್ -1966

*ಆತ್ಮೀಯರಾದ ಶ್ರೀ ಶಿವನಂಜಪ್ಪ,*

ಮಂಡ್ಯ ಜಿಲ್ಲೆಯ, ಮದ್ದೂರಿನ ಹತ್ತಿರ ಕಾಳಮುದ್ದನ ದೊಡ್ಡಿಯಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಸಂಬಂಧಿಸಿದಂತೆ ದಿನಾಂಕ 8, ಫೆಬ್ರವರಿ 1966 ರಂದು ನಿಮ್ಮಿಂದ ಬಂದ ಪತ್ರವನ್ನು ಗಮನಿಸಿದ್ದೇನೆ. ಪ್ರಸ್ತುತ ಈ ಅರ್ಜಿಯನ್ನು ರಾಜ್ಯ ಸರ್ಕಾರದೊಂದಿದೆ ಸಮಾಲೋಚಿಸಿ, ಪರಿಶೀಲಿಸಲಾಗುತ್ತಿದೆ.

ನೀವು ಪ್ರಸ್ತಾಪಿಸಿರುವಂತೆ ಮೈಸೂರು ರಾಜ್ಯದ ಇತರ ಸಕ್ಕರೆ ಕಾರ್ಖಾನೆಗಳ ಲೈಸನ್ಸ್‌ಗೆ ಸಂಬಂಧಿಸಿದಂತೆ ನಾನು ತಿಳಿಸುವುದೇನೆಂದರೆ, ಕೆ.ಎಂ.ದೊಡ್ಡಿಯ ಅರ್ಜಿಗಿಂತ ಮೊದಲು ಅವುಗಳನ್ನು ಪಡೆಯಲಾಗಿದೆ. ಆದಾಗ್ಯೂ ಸಹ,

ಈ ಅರ್ಜಿಯ ಬಗ್ಗೆಯೂ ಎಲ್ಲಾ ರೀತಿಯಲ್ಲೂ ಸಹಾನುಭೂತಿಯಿಂದ ಪರಿಶೀಲಿಸಲಾಗುವುದೆಂಬ ಭರವಸೆಯನ್ನು ತಮಗೆ ನೀಡುತ್ತೇನೆ.

ತಮ್ಮ ವಿಶ್ವಾಸಿ,
ಸಿ.ಸುಬ್ರಹ್ಮಣ್ಯಂ

ಶ್ರೀ ಎಂ.ಕೆ. ಶಿವನಂಜಪ್ಪ, ಎಂ.ಪಿ.
ಮಂಡ್ಯ, ಮೈಸೂರು ರಾಜ್ಯ



D.O.No.F.25(450)/64-ST
MFA/VIP/316/66
MINISTER FOR
FOOD & AGRICULTURE,
GOVT. OF INDIA.

NEW DELHI:
March 3,1966.

My dear Shri Shivnanjappa,

Please refer to your letter dated the 8th February, 1966 regarding the establishment of a cooperative sugar factory in Kalamuddanadoddy near Maddur in Mandya district. This application is at present under examination in consultation with the State Government. So far as the licensing of other factories in Mysore State to which you have made a reference is concerned, I may mention that applications for the same were received much earlier than the application for K.M.Doddi. However, I may assure you that every consideration will be given to this application also.

Yours sincerely,

C Subramaniam

( C.SUBRAMANIAM)

Shri M.K.Shivananjappa, M.P.,
Mandya,
Mysore State.

ಮೇಲ್ಕಂಡ ಪತ್ರದಲ್ಲಿ ಕೇಂದ್ರ ಸಚಿವರಾದ ಶ್ರೀ ಸುಬ್ರಹ್ಮಣ್ಯಂ ಅವರು ಪ್ರಸ್ತಾಪಿಸಿರುವಂತೆ, ಮೈಸೂರು ರಾಜ್ಯದ ಅನೇಕ ಕಡೆಗಳಿಂದ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗಾಗಿ ಬೇರೆ ಬೇರೆ ಸಂಘ - ಸಂಸ್ಥೆಗಳು ಇದೇ ಅವಧಿಯಲ್ಲಿ ಪ್ರಯತ್ನಿಸುತ್ತಿದ್ದವು. ಹಿರಿಯೂರು, ಕೊಳ್ಳೇಗಾಲ, ಬೀದರ್ ಮತ್ತು ಹುಬ್ಬಳ್ಳಿಗಳಿಂದ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಬೇಡಿಕೆಗಳು ಕೇಂದ್ರ ಸರ್ಕಾರದ ಮುಂದೆ ಮಂಡಿಸಲ್ಪಟ್ಟಿದ್ದವು.

ಸರಿ ಸುಮಾರು ಇದೇ ಅವಧಿಯಲ್ಲಿ ಅಂದರೆ, ದಿನಾಂಕ 4-5-1965ರಲ್ಲಿ ಶ್ರೀ ಎಚ್.ಕೆ. ವೀರಣ್ಣಗೌಡರ ನೇತೃತ್ವದಲ್ಲಿ ಮದ್ದೂರಿನ ರೈಲ್ವೆ ಸ್ಟೇಷನ್ ಬಳಿಯ ಶಿವಪುರದಲ್ಲಿ ಒಂದು ಸಕ್ಕರೆ ಕಾರ್ಖಾನೆಯನ್ನು ಸ್ಥಾಪನೆ ಮಾಡಬೇಕೆಂಬ ಕೋರಿಕೆಯ ಅರ್ಜಿಯನ್ನು ಕೇಂದ್ರ ಸರ್ಕಾರಕ್ಕೆ, ಮದ್ದೂರಿನ ಸುತ್ತಮುತ್ತಲ ಗ್ರಾಮಸ್ಥರ ಪರವಾಗಿ ಸಲ್ಲಿಸಲಾಗಿತ್ತು. ಕಾಳಮುದ್ದನ ದೊಡ್ಡಿಯಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಪ್ರಯತ್ನಿಸುತ್ತಿದ್ದ ಜಿ. ಮಾದೇಗೌಡರಿಗೆ, ಮದ್ದೂರಿನಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲೆಂದು ಎಚ್.ಕೆ.ವೀರಣ್ಣಗೌಡರ ನೇತೃತ್ವದಲ್ಲಿ ನೀಡಿದ್ದ ಅರ್ಜಿಯು ಸಾಕಷ್ಟು ಸವಾಲನ್ನು ಹಾಕಿತ್ತು. ಏಕೆಂದರೆ ಅಂದಿನ ಕಾಲಕ್ಕಾಗಲೇ ಎಚ್.ಕೆ.ವೀರಣ್ಣಗೌಡರು ಮೈಸೂರು ಸಂಸ್ಥಾನದ ರಾಜಕೀಯ ರಂಗದಲ್ಲಿ ಬಹಳ ಖ್ಯಾತಿಯನ್ನು ಮತ್ತು ಪ್ರಭಾವವನ್ನು ಹೊಂದಿದ್ದರು. ಕಾಳಮುದ್ದನ ದೊಡ್ಡಿಯಂತಹ ಗ್ರಾಮಾಂತರ ಪ್ರದೇಶದಲ್ಲಿ ಬೃಹತ್ ಕೈಗಾರಿಕೆಯನ್ನು ನೆಲೆಗೊಳಿಸಿ, ಈ ಭಾಗದ ಗ್ರಾಮೀಣ ಜನತೆಯ ಬದುಕಿನಲ್ಲಿ ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿಯನ್ನು ಉಂಟುಮಾಡಲೆಂದು ಅಡಿಯಿಟ್ಟಿದ್ದ ಜಿ.ಮಾದೇಗೌಡರು ಇದರಿಂದ ಕಂಗಾಲಾಗದೆ, ಅತ್ಯಂತ ಶ್ರದ್ಧೆಯಿಂದ ತಮ್ಮ ಪ್ರಯತ್ನಗಳನ್ನು ಮುಂದುವರಿಸಿದರು.

ಅಂದು ಮೈಸೂರು ಸಂಸ್ಥಾನದ ರಾಜಕೀಯ ರಂಗದಲ್ಲಿ ಅತ್ಯುತ್ತಮವಾದ ಹೆಸರನ್ನು ಪಡೆದು, ಲೋಕ ಸಭಾ ಸದಸ್ಯರಾಗಿ, ರಾಷ್ಟ್ರೀಯ ಮುಖಂಡರಲ್ಲಿ ಒಬ್ಬರಾಗಿದ್ದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಕೆಂಗಲ್‌ಹನುಮಂತಯ್ಯನವರೊಡನೆ ಜಿ.ಮಾದೇಗೌಡರು ಸಂಪರ್ಕ ಬೆಳೆಸಿ, ಕೇಂದ್ರ ಸರ್ಕಾರದಿಂದ ಕೈಗಾರಿಕಾ ಲೈಸನ್ಸ್ ಪಡೆಯುವ ದಿಶೆಯಲ್ಲಿ ನೆರವಾಗಬೇಕೆಂದು ವಿನಂತಿಸಿಕೊಳ್ಳುತ್ತಾರೆ. ಆಗ ಶ್ರೀ ಕೆಂಗಲ್ ಹನುಮಂತಯ್ಯನವರು ಜಿ.ಮಾದೇಗೌಡರ ಪ್ರಯತ್ನಕ್ಕೆ ಶುಭ ಕೋರಿ ಬರೆದಿರುವ ಪತ್ರ ಈ ಕೆಳಕಂಡಂತಿದೆ.

## ಪತ್ರ - 3

ಕೆ.ಹನುಮಂತಯ್ಯ
ಲೋಕ ಸಭಾ ಸದಸ್ಯರು

ಹೊಸ ದೆಹಲಿ
15, ಮಾರ್ಚ್ 1966

ಆತ್ಮೀಯರಾದ ಶ್ರೀ ಮಾದೇಗೌಡ,

ತಾ॥ 8 ಮಾರ್ಚ್ 66ರಂದು ನೀವು ಬರೆದಿರುವ ಪತ್ರ ನನಗೆ ತಲುಪಿದೆ. ಈ ದಿನ ಶ್ರೀ ಸಿ. ಸುಬ್ರಹ್ಮಣ್ಯಂ ಅವರಿಗೆ ಈ ಬಗ್ಗೆ ನಾನು ಪತ್ರ ಬರೆದಿದ್ದೇನೆ. ಅವರ ಉತ್ತರಕ್ಕಾಗಿ ಕಾಯೋಣ. ನಿಮಗೆ ಎಲ್ಲಾ ರೀತಿಯಿಂದಲೂ ಯಶಸ್ಸು ಲಭಿಸಲೆಂದು ಹಾರೈಸುತ್ತೇನೆ.

ತಮ್ಮ ವಿಶ್ವಾಸಿ,
ಕೆ.ಹನುಮಂತಯ್ಯ

K.Hanumanthaiya,M.P.

New Delhi.
15th March, 1966.

My dear Sri Made Gowda,

I have your letter dated 8th March, 1966. I have today written a letter to Sri C.Subramaniam. Let us wait for his reply. I wish you all the good luck.

Yours sincerely,
K. Hanumanthaiya

ಈ ರೀತಿ ಪ್ರತಿನಿತ್ಯವೂ ಒಂದಲ್ಲ ಒಂದು ಬಗೆಯಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೊಡನೆ ಮತ್ತು ರಾಜಕೀಯ ಧುರೀಣರೊಡನೆ ನಿರಂತರವಾದ ಸಂಪರ್ಕವನ್ನು ಇಟ್ಟುಕೊಂಡು ಕೈಗಾರಿಕಾ ಲೈಸನ್ಸ್ ಅನ್ನು ಪಡೆಯಲು ಅಗತ್ಯವಾದ ಪ್ರಯತ್ನಗಳನ್ನು ಜಿ.ಮಾದೇಗೌಡರು ಮುಂದುವರಿಸಿದರು.

1960ರ ದಶಕದಲ್ಲಿ ಇಡೀ ದೇಶವೇ ತೀವ್ರವಾದ ಆರ್ಥಿಕ ಸಂಕಷ್ಟಕ್ಕೆ ಗುರಿಯಾಗಿತ್ತು. ಏಕೆಂದರೆ 1962ರಲ್ಲಿ ಚೀನಾ ದೇಶದೊಡನೆ ನಡೆದ ಯುದ್ಧ ಮತ್ತು 1965ರಲ್ಲಿ ಪಾಕಿಸ್ತಾನದೊಡನೆ ನಡೆದ ಸಮರಗಳಿಂದ ಉಂಟಾದ ದುಷ್ಪರಿಣಾಮವು ಪ್ರಮುಖವಾಗಿ ಭರತಖಂಡದ ಆರ್ಥಿಕ ರಂಗದಲ್ಲಿ ಅಪಾರವಾದ ಕ್ಷೋಭೆಯನ್ನುಂಟುಮಾಡಿತ್ತು. ರಾಜ್ಯ ಮತ್ತು ಕೇಂದ್ರ ಸರ್ಕಾರಗಳು ನಾನಾ ಬಗೆಯ ಅರ್ಥಿಕ ಸಮಸ್ಯೆಗಳಿಂದ ಜರ್ಜರಿತವಾಗಿದುದ್ದರಿಂದ, ಹೊಸ ಕೈಗಾರಿಕೆಗಳ ಸ್ಥಾಪನೆಗೆ ಅಗತ್ಯವಾದ ಬಂಡವಾಳದ ಕೊರತೆಯು ಇಡೀ ದೇಶವನ್ನೇ ಕಾಡುತ್ತಿತ್ತು. ರಾಷ್ಟ್ರದಲ್ಲಿನ ಆರ್ಥಿಕ ರಂಗದಲ್ಲೂ ಅನೇಕ ಬದಲಾವಣೆಗಳು ಕಂಡುಬಂದವು. ಭರತಖಂಡದ ಪ್ರಧಾನಿ ಶ್ರೀ ಲಾಲ್ ಬಹದ್ದೂರ್‌ಶಾಸ್ತ್ರಿ ಅವರ ಅಕಾಲ ಮರಣದ ನಂತರ, ಶ್ರೀಮತಿ ಇಂದಿರಾ ಗಾಂಧಿ ಅವರು ಪ್ರಧಾನಿಯಾಗಿ ಅಧಿಕಾರವನ್ನು ವಹಿಸಿಕೊಂಡರು. ಕೇಂದ್ರ ಸಚಿವ ಸಂಪುಟದಲ್ಲಿ ಶ್ರೀ ಜಗಜೀವನರಾಮ್ ಅವರು ಆಹಾರ ಮತ್ತು ಕೃಷಿ ಸಚಿವರಾಗಿ ನೇಮಕಗೊಂಡರು.

ಜಿ.ಮಾಗೇಗೌಡರು ಶ್ರೀ ಜಗಜೀವನ ರಾಮ್ ಅವರಿಗೆ ಪತ್ರವನ್ನು ಬರೆದು, ಕೈಗಾರಿಕಾ ಲೈಸನ್ಸ್‌ಗಾಗಿ ತಾವು ಇದುವರೆಗೂ ನಡೆಸಿರುವ ಪ್ರಯತ್ನಗಳ್ನು ವಿವರಿಸಿ, ಗ್ರಾಮಾಂತರ ಪ್ರದೇಶದ ರೈತ ಸಮುದಾಯದ ಆರ್ಥಿಕ ಪ್ರಗತಿಗೆ ನೆರವಾಗುವ ಈ ಯೋಜನೆಗೆ ಅನುಮತಿಯನ್ನು ನೀಡಬೇಕೆಂದು ಕೋರಿಕೊಂಡರು. ಜಿ.ಮಾದೇಗೌಡರ ಪತ್ರಕ್ಕೆ ಉತ್ತರವನ್ನು ಬರೆದ ಕೇಂದ್ರ ಸಚಿವ ಶ್ರೀ ಜಗಜೀವನರಾಮ್ ಅವರು, ಕೈಗಾರಿಕಾ ಲೈಸನ್ಸ್ ಅನ್ನು ನೀಡುವುದರ ಬಗ್ಗೆ ಮತ್ತು ಕೈಗಾರಿಕೆಗಳ ಸ್ಥಾಪನೆಯ ಬಗ್ಗೆ ಕೂಲಂಕಷವಾಗಿ ಕೆಲವು ವಿಚಾರಗಳನ್ನು ಈ ಕೆಳಕಂಡಂತೆ ಪ್ರಸ್ತಾಪಿಸಿದರು.

# ಪತ್ರ - 4

ಡಿ.ಒ.ನಂ.ಎಫ್.25(450)-67-ಎಸ್.ಟಿ.

ಆಹಾರ ಮತ್ತು ಕೃಷಿ ಸಚಿವರು
ಭಾರತ ಸರ್ಕಾರ
ಹೊಸ ದೆಹಲಿ
24-ಏಪ್ರಿಲ್ -1967

*ಆತ್ಮೀಯರಾದ ಶ್ರೀ ಗೌಡ,*

ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕು, ಕೆ.ಎಂ.ದೊಡ್ಡಿಯಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ವಿಷಯದ ಬಗ್ಗೆ ದಿನಾಂಕ 27-3-67ರಂದು ತಾವು ಬರೆದಿರುವ ಪತ್ರವನ್ನು ಗಮನಿಸಲಾಗಿದೆ.

ಸಹಕಾರಿ ಸಕ್ಕರೆ ಕಾರ್ಖಾನೆಗಳು ಸ್ಥಾಪನೆಗೊಳ್ಳಲು ಕೈಗಾರಿಕಾ ಹಣಕಾಸು ನಿಗಮದಂತಹ ಹಣಕಾಸು ಸಂಸ್ಥೆಗಳ ನೆರವನ್ನು ಬಹು ಪ್ರಮುಖವಾಗಿ ಅವಲಂಬಿಸಿರುತ್ತವೆ. ಕೈಗಾರಿಕಾ ಹಣಕಾಸಿನ ನಿಗಮಗಳಿಗೆ ಸೀಮಿತವಾದ ಆದಾಯದ ಮೂಲಗಳಿರುವುದರಿಂದ ಮತ್ತು ಆದ್ಯತೆಯನ್ನು ಪಡೆದಿರುವ ಕೈಗಾರಿಕಾ ಸಂಸ್ಥೆಗಳಿಂದ ಬೇಡಿಕೆಯಿರುವುದರಿಂದ, ಈಗಾಗಲೇ ಲೈಸನ್ಸ್ ಅನ್ನು ಪಡೆದಿರುವಂಥ ಕಾರ್ಖಾನೆಗಳಿಗೆ ಹಣಕಾಸಿನ ನೆರವನ್ನು ದೊರಕಿಸಲು ಕಷ್ಟವಾಗಿದೆ. ಹೀಗಾಗಿ ಹೆಚ್ಚು ಹೊಸ ಸಕ್ಕರೆ ಕಾರ್ಖಾನೆಗಳಿಗೆ ಲೈಸನ್ಸ್ ನೀಡುವ ವಿಷಯವು ಇನ್ನೂ ಪರಿಶೀಲನೆಯ ಹಂತದಲ್ಲಿದೆ. ಈ ಬಗ್ಗೆ ಹೊಸ ಸಕ್ಕರೆ ಕಾರ್ಖಾನೆಗಳಿಗೆ ಲೈಸನ್ಸ್ ಕೊಡಲು ತೀರ್ಮಾನಿಸಿದ ಕೂಡಲೇ, ನಿಮ್ಮ ಅರ್ಜಿಗೂ ಸೂಕ್ತ ಗಮನಹರಿಸಿ, ಪರಿಶೀಲಿಸಲಾಗುವುದು.

ತಮ್ಮ ವಿಶ್ವಾಸಿ,
**ಜಗಜೀವನ ರಾಮ್**

**ಶ್ರೀ ಜಿ.ಮಾದೇಗೌಡ,**
ಚೀಫ್ ಪ್ರಮೋಟರ್,
ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ.),
ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು,
ಮಂಡ್ಯ ಜಿಲ್ಲೆ,
ಮೈಸೂರು ರಾಜ್ಯ.



D.O.No.F.25(450)/67-ST.

MINISTER FOR
FOOD & AGRICULTURE,
GOVT. OF INDIA.

New Delhi, the 24th April, 1967.

Dear Shri Gowda

Please refer to your letter dated the 27th March, 1967, regarding the establishment of a cooperative sugar factory at K.M. Doddi, Maddur Taluk, Distt. Mandya.

Cooperative sugar factories depend for a major part of finances required for their establishment on financial institutions such as the Industrial Finance Corporation. Due to limited resources of these institutions and demand from other priority industries also, there is difficulty in arranging finances even for the factories which have already been licensed. Therefore, the question of licensing more new sugar factories is still under consideration and as soon as it is decided to license more factories, your application will receive due consideration.

Yours sincerely,

(Jagjivan Ram)

Shri G. Made Gowda,
Chief Promoter,
Bharathi S.S.K.Ltd.,
K.M. Doddi, Maddur Taluk,
Mandya District,
(Mysore State)

ಕೇಂದ್ರ ಸಚಿವರಾದ ಶ್ರೀ ಜಗಜೀವನ ರಾಮ್ ಅವರಿಂದ ಬಂದ ಈ ಪತ್ರವು ಜಿ.ಮಾದೇಗೌಡರ ಪಾಲಿಗೆ ಹೊಸ ಸಮಸ್ಯೆಗಳನ್ನು ತಂದೊಡ್ಡಿತು. ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾಗಿದ್ದ ಎರಡು ಕೋಟಿ ರೂ.ಗಳ ಬಂಡವಾಳದ ಮೊತ್ತದಲ್ಲಿ, ಶೇ.50 ರಷ್ಟು ಕೇಂದ್ರ ಸರ್ಕಾರದ ಅಧೀನದಲ್ಲಿರುವ ಕೈಗಾರಿಕಾ ಹಣಕಾಸು ನಿಗಮಗಳಿಂದ ಪಡೆಯಬೇಕೆಂಬ ಉದ್ದೇಶವನ್ನು ಜಿ.ಮಾದೇಗೌಡರು ಹೊಂದಿದ್ದರು. ಆದರೆ ಯುದ್ಧಗಳ ದುಷ್ಪರಿಣಾಮದಿಂದ ರಾಷ್ಟ್ರವು ಈಗ ಆರ್ಥಿಕವಾಗಿ ಹಿಂಜರಿತಕ್ಕೆ ಒಳಗಾಗಿದ್ದು, ಈ ಹಿನ್ನೆಲೆಯಲ್ಲಿ ಕೇಂದ್ರ ಸಚಿವ ಶ್ರೀ ಜಗಜೀವನ ರಾಮ್ ಅವರು ಬರೆದಿದ್ದ ಮೇಲ್ಕಂಡ ಪತ್ರವು ಆರ್ಥಿಕ ಮುಗ್ಗಟ್ಟನ್ನು ಪ್ರಧಾನವಾಗಿ ತಿಳಿಸಿ, ಹೊಸ ಕೈಗಾರಿಕಾ ಲೈಸನ್ಸ್‌ಗಳ ಬಗ್ಗೆ ನಿರಾಸಕ್ತಿ ತಳೆದಿತ್ತು.

ಈಗ ಜಿ.ಮಾದೇಗೌಡರ ಪಾಲಿಗೆ "ಅತ್ತ ದರಿ; ಇತ್ತ ಹುಲಿ" ಎಂಬಂಥ ಇಕ್ಕಟ್ಟಿನ ಸನ್ನಿವೇಶ ಎದುರಾಯಿತು.

ಕೇಂದ್ರ ಸರ್ಕಾರದ ದೃಷ್ಟಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಲೈಸನ್ಸ್ ಪಡೆಯುವ ಮೊದಲು, ಸಂಬಂಧಪಟ್ಟ ಸಂಸ್ಥೆಯಲ್ಲಿ ಬಂಡವಾಳ ಸಂಗ್ರಹವಾಗಿರಬೇಕು.

ಆದರೆ ಆರ್ಥಿಕ ನೆರವನ್ನು ನೀಡುವ ವಿವಿಧ ಬ್ಯಾಂಕ್‌ಗಳು ಮತ್ತು ಇನ್ನಿತರ ಹಣಕಾಸು ನಿಗಮಗಳ ದೃಷ್ಟಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಹಣವನ್ನು ಸಾಲದ ರೂಪದಲ್ಲಿ ಸಂಬಂಧಪಟ್ಟ ಸಂಸ್ಥೆಗೆ ನೀಡುವ ಮುನ್ನ, ಆ ಸಂಸ್ಥೆಗೆ ಕೇಂದ್ರ ಸರ್ಕಾರದಿಂದ ಕೈಗಾರಿಕಾ ಲೈಸನ್ಸ್ ಮಂಜೂರಾಗಿರಬೇಕು.

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಕೈಗಾರಿಕಾ ಲೈಸನ್ಸ್ ಅನ್ನು ಮೊದಲು ಪಡೆಯಬೇಕೋ ? ........ಅಥವಾ........ಬಂಡವಾಳ ಸಂಗ್ರಹವನ್ನು ಮೊದಲು ಮಾಡಬೇಕೋ ? ........ಎಂಬ ದ್ವಂದ್ವದಲ್ಲಿ ಜಿ.ಮಾದೇಗೌಡರು ಸಿಲುಕಿದರು. ಈ ಎರಡರಲ್ಲಿ ಯಾವುದಾದರೊಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗಿತ್ತು. ಈ ಸಂದರ್ಭದಲ್ಲಿ ಜಿ.ಮಾದೇಗೌಡರು ಕೈಗಾರಿಕಾ ಲೈಸನ್ಸ್ ಅನ್ನು ಮೊದಲು ಪಡೆದುಕೊಳ್ಳಬೇಕೆಂಬ ನಿರ್ಧಾರವನ್ನು ಕೈಗೊಂಡರು.

ಜಿ.ಮಾದೇಗೌಡರ ವ್ಯಕ್ತಿತ್ವದಲ್ಲಿ ಕಂಡುಬರುವ ಪ್ರಮುಖವಾದ ಒಂದು ಗುಣವೇನೆಂದರೆ ಯಾವುದೇ ಸಾರ್ವಜನಿಕ ಕಾರ್ಯಕ್ಕೆ ತೊಡಗುವ ಸಂದರ್ಭದಲ್ಲಿ ಸದುದ್ದೇಶದ ಯೋಜನೆಯನ್ನು ರೂಪಿಸುವುದಕ್ಕೆ ಮೊದಲ ಮನ್ನಣೆಯನ್ನು ನೀಡುತ್ತಾರೆ. ಎರಡನೆಯ ಪ್ರಾಧಾನ್ಯತೆಯನ್ನು ಹಣಕ್ಕೆ ನೀಡುತ್ತಾರೆ. ಉತ್ತಮ ಉದ್ದೇಶದಿಂದ ಕೈಗೊಳ್ಳುವ ಯಾವುದೇ ಬಗೆಯ ಜನಪರವಾದ ಕಾರ್ಯಗಳಿಗೆ ಖಂಡಿತವಾಗಿ ಹಣವು ಲಭಿಸುತ್ತದೆ ಎಂಬ ಆತ್ಮ ವಿಶ್ವಾಸ ಅವರಲ್ಲಿದೆ. ಕೈಗಾರಿಕಾ ಲೈಸನ್ಸ್ ಅನ್ನು ಮೊದಲು ಪಡೆದುಕೊಂಡರೆ, ಅದನ್ನು ಮುಂದಿಟ್ಟುಕೊಂಡು ರೈತರಿಂದ, ವಿವಿಧ ಬ್ಯಾಂಕ್ ಹಾಗೂ ಹಣಕಾಸಿನ ನಿಗಮಗಳಿಂದ ಮತ್ತು ರಾಜ್ಯ ಸರ್ಕಾರದ ವತಿಯಿಂದ ಷೇರುಗಳ ರೂಪದಲ್ಲಿ ಬಂಡವಾಳವನ್ನು ಸಂಗ್ರಹಿಸಬಹುದೆಂಬ ಅಚಲ ವಿಶ್ವಾಸ ಜಿ.ಮಾದೇಗೌಡರಲ್ಲಿತ್ತು.

ಕೇಂದ್ರ ಸಚಿವರಾದ ಶ್ರೀ ಜಗಜೀವನ ರಾಮ್ ಅವರಿಗೆ ಮತ್ತೆ ಪತ್ರ ಬರೆದು ಈ ಕೆಳಕಂಡಂತೆ ಜಿ.ಮಾದೇಗೌಡರು ವಿನಂತಿಸಿಕೊಳ್ಳುತ್ತಾರೆ.

ಕಾಳಮುದ್ದನ ದೊಡ್ಡಿಯಂತಹ ಗ್ರಾಮೀಣ ಪ್ರದೇಶದಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯು ಹೇಗೆ ರೈತ ಸಮುದಾಯದ, ಕೃಷಿ ಕಾರ್ಮಿಕರ ಮತ್ತು ಹಿಂದುಳಿದ ಎಲ್ಲಾ ವರ್ಗದ ಜನರಿಗೆ ಅತ್ಯಧಿಕವಾದ ನೂರಾರು ಬಗೆಯ ಉದ್ಯೋಗದ ಅವಕಾಶಗಳನ್ನು ಕಲ್ಪಿಸಿ, ಲಕ್ಷಾಂತರ ಮಂದಿಯ ಬದುಕಿನಲ್ಲಿ ಆರ್ಥಿಕ ಪ್ರಗತಿಯನ್ನುಂಟುಮಾಡಿ, ಸಾಮಾಜಿಕ ಸುಧಾರಣೆಯ ಧ್ಯೇಯಗಳನ್ನು ಕಾರ್ಯರೂಪಕ್ಕೆ ತರುತ್ತದೆ ಎಂಬುದನ್ನು ವಿವರವಾಗಿ ತಿಳಿಸಿ, ಕೈಗಾರಿಕಾ ಲೈಸನ್ಸ್ ಅನ್ನು ಅತಿ ಶೀಘ್ರವಾಗಿ ನೀಡಬೇಕೆಂದು ಪ್ರಾರ್ಥಿಸಿಕೊಳ್ಳುತ್ತಾರೆ. ಕೇಂದ್ರ ಸರ್ಕಾರದ ವತಿಯಿಂದ ಕೈಗಾರಿಕಾ ಲೈಸನ್ಸ್ ದೊರೆತ ಕೂಡಲೇ, ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಬಂಡವಾಳವನ್ನು ಸಂಗ್ರಹಿಸಿ, ಅತ್ಯಲ್ಪ ಅವಧಿಯಲ್ಲೇ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಭರವಸೆಯನ್ನು ನೀಡುತ್ತಾರೆ.

ಈ ಪತ್ರಕ್ಕೆ ಕೇಂದ್ರ ಸರ್ಕಾರದಿಂದ ಅಥವಾ ಕೇಂದ್ರ ಸರ್ಕಾರದ ಸಚಿವರಾದ ಶ್ರೀ ಜಗಜೀವನರಾಮ್ ಅವರಿಂದ ಯಾವುದೇ ಉತ್ತರ ಬರುವುದಿಲ್ಲ. ಕೇಂದ್ರ ಸರ್ಕಾರದ ಪತ್ರಗಳ ಸಾಗರದಲ್ಲಿ ಸೇರಿ ಹೋಗುತ್ತದೆ. ಜಿ.ಮಾದೇಗೌಡರು ಸಕ್ಕರೆ ಕಾರ್ಖಾನೆಯ ಲೈಸೆನ್ಸ್‌ಗಾಗಿ ಕೇಂದ್ರ ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿ ಈಗಾಗಲೇ ಮೂರು ವರ್ಷಗಳು ಕಳೆಯುತ್ತಾ ಬಂದವು. ಈ ಅವಧಿಯಲ್ಲಿ ಕೇಂದ್ರ ಸರ್ಕಾರದ ಆಹಾರ ಮತ್ತು ಕೃಷಿ ಇಲಾಖೆಯು ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಅನೇಕ ಬಗೆಯ ಮಾಹಿತಿಗಳನ್ನು ಪದೇ ಪದೇ ಕೇಳುತ್ತಿದ್ದಾಗ, ಲೈಸೆನ್ಸ್‌ಗೆ ಅಗತ್ಯವಾದ ಎಲ್ಲಾ ವಿಧವಾದ ಅಂಕಿ ಅಂಶಗಳನ್ನು ದಾಖಲೆಗಳ ಮೂಲಕ ಒದಗಿಸುತ್ತಾ, ಲೈಸೆನ್ಸ್ ನೀಡಿಕೆಯಲ್ಲಿ ಆಗುತ್ತಿರುವ ವಿಳಂಬದಿಂದ ನಿರಾಶೆಗೊಳ್ಳದೆ ಜಿ. ಮಾದೇಗೌಡರು ತಮ್ಮ ಪ್ರಯತ್ನವನ್ನು ಮತ್ತೆ ಮತ್ತೆ ಮುಂದುವರಿಸಿದರು.

ಮೈಸೂರು ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಈ ಬಗ್ಗೆ ಜ್ಞಾಪಕ ಪತ್ರಗಳನ್ನು ಬರೆಸಿ, ಆದಷ್ಟೂ ಬೇಗ ಲೈಸೆನ್ಸ್ ಪಡೆಯುವುದಕ್ಕಾಗಿ ರಾಜ್ಯ ಸರ್ಕಾರದ ವತಿಯಿಂದಲೂ ಒತ್ತಡವನ್ನೂ ತರುತ್ತಾರೆ. ಈ ಕೆಳಗಿನ ಒಂದು ಪತ್ರವು ಇಂತಹ ಪ್ರಯತ್ನಗಳಿಗೆ ಸಾಕ್ಷಿಯಾಗಿದೆ.

## ಪತ್ರ - 5

ಕೆ.ಜಿ.ಚನ್ನವೀರಪ್ಪ
ಮುಖ್ಯಮಂತ್ರಿಗಳ ಖಾಸಗಿ ಕಾರ್ಯದರ್ಶಿ

ಸಿ.ಎಂ.II 712/67
ವಿಧಾನ ಸೌಧ
ಬೆಂಗಳೂರು -1
ದಿನಾಂಕ 4-7-67

ಅಧ್ಯಕ್ಷರು,
ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ
ಕಾಳಮುದ್ದನ ದೊಡ್ಡಿ
ಮದ್ದೂರು ತಾಲ್ಲೂಕು
ಮಂಡ್ಯ ಜಿಲ್ಲೆ.

ಮಾನ್ಯರೇ,

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ವತಿಯಿಂದ ಕಾಳಮುದ್ದನ ದೊಡ್ಡಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಲೈಸನ್ಸ್ ನೀಡುವ ಬಗ್ಗೆ ರಾಜ್ಯದ ಮುಖ್ಯ ಮಂತ್ರಿಗಳ ಪತ್ರಕ್ಕೆ (ಸಿ.ಎಮ್.ಐ.329/67 ದಿನಾಂಕ 20/21 ಜೂನ್ 1967) ಕೇಂದ್ರದ ಆಹಾರ ಮತ್ತು ಕೃಷಿ ಸಚಿವರು ಉತ್ತರವನ್ನು ನೀಡಿ, ಈ ವಿಷಯವು ಭಾರತ ಸರ್ಕಾರದ ಪರಿಶೀಲನೆಯಲ್ಲಿದೆ ಎಂದು ತಿಳಿಸಿರುತ್ತಾರೆ. ಇದನ್ನು ತಮ್ಮ ಗಮನಕ್ಕೆ ಈ ಮೂಲಕ ತರುತ್ತಿದ್ದೇನೆ.

ತಮ್ಮ ವಿಶ್ವಾಸಿ,
ಕೆ.ಜಿ.ಚನ್ನವೀರಪ್ಪ
i/c ಮುಖ್ಯಮಂತ್ರಿಗಳ
ಖಾಸಗಿ ಕಾರ್ಯದರ್ಶಿ

CM II 212/67

K.G. Channaveerappa,
[redacted].,
..ate Secretary to the Chief Minister.

VIDHANA SOUDHA,
Bangalore-1, dated 4-7-67 196

To

The President,
Bharati Sahakara Sakkare Karkhane,
Kalmuddanadodi,
Maddur Taluk,
Mandya District.

Sir,

I am desired to state that in reply to Chief Minister's letter No.CM.I.329/67,dated 20/21st June 1967, regarding sanction of an industrial licence to establish a Co-operative Sugar Factory at Kalumuddanadodi by the Bharati Sahakar Sakkare Karkhane, the Union Ministry for Food and Agriculture has informed us that the matter is under examination by the Government of India. This is for your kind information.

Yours faithfully,
K.G. Channaveerappa
(K.G. Channaveerappa)
I/c Private Secretary to the
Chief Minister.

---

ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಲೈಸೆನ್ಸ್ ನೀಡುವ ಅಧಿಕಾರವುಳ್ಳ ಕೇಂದ್ರ ಸರ್ಕಾರದ ಮೇಲೆ, ಯಾವ ಯಾವ ಕಡೆಗಳಿಂದ ಪ್ರಭಾವವನ್ನು ಬೀರಬಹುದೋ, ಆ ಎಲ್ಲ ಮಾರ್ಗಗಳಲ್ಲೂ ಜಿ.ಮಾದೇಗೌಡರು ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಭಾರತ ಸರ್ಕಾರದ ಯೋಜನಾ ಆಯೋಗದ ಉಪಾಧ್ಯಕ್ಷರಿಗೆ ಪತ್ರವನ್ನು ಬರೆದು, ಕಾರ್ಖಾನೆಯ ಸ್ಥಾಪನೆಗೆ ಯೋಜನಾ ಆಯೋಗದ ಬೆಂಬಲವನ್ನು ಕೋರಿದರು. ಅಂದು ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಶ್ರೀ ಗಾಡ್ಗಿಲ್ ಅವರು ಜಿ.ಮಾದೇಗೌಡರ ಪತ್ರಕ್ಕೆ ಪ್ರತಿಕ್ರಿಯಿಸಿ, ಇವರ ಪ್ರಯತ್ನಕ್ಕೆ ಯಶಸ್ಸು ಲಭಿಸಲೆಂದು ಹಾರೈಸುತ್ತಾರೆ.

## ಪತ್ರ - 6

ಡಿ.ಆರ್. ಗಾಡ್ಗಿಲ್
ಉಪಾಧ್ಯಕ್ಷರು

ಯೋಜನಾ ಆಯೋಗ
ಹೊಸ ದೆಹಲಿ
ದಿನಾಂಕ 23, ನವೆಂಬರ್ 1967

ಆತ್ಮೀಯರೇ,

ತಾವು ದಿನಾಂಕ 18, ನವೆಂಬರ್ 1967 ರಂದು ಬರೆದ ಪತ್ರಕ್ಕಾಗಿ ಧನ್ಯವಾದಗಳು. ಮಂಡ್ಯ ಜಿಲ್ಲೆಯಲ್ಲಿ ನೀವು ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಪ್ರಯತ್ನಿಸುತ್ತಿರುವ ವಿಷಯ ತಿಳಿದು ಬಹಳ ಸಂತೋಷವಾಯಿತು. ಕೇಂದ್ರದ ಆಹಾರ ಮತ್ತು ಕೃಷಿ ಸಚಿವಾಲಯವು ಹೊಸದಾಗಿ ಸಕ್ಕರೆ ಕಾರ್ಖಾನೆಗಳಿಗೆ ಲೈಸೆನ್ಸ್ ನೀಡುವುದರ ಬಗ್ಗೆ ಪರಿಶೀಲನೆ ಮಾಡುತ್ತಿದೆ. ಮೈಸೂರು ರಾಜ್ಯದಲ್ಲಿ ಇದಕ್ಕೆ ಸಂಬಂಧಪಟ್ಟವರಿಂದ ನೀವು ಪಡೆಯುವ ಸಕ್ರಿಯ ಪ್ರೋತ್ಸಾಹದಿಂದ ನಿಮ್ಮ ಪ್ರಯತ್ನದಲ್ಲಿ ಯಶಸ್ಸು ಲಭಿಸುವುದೆಂದು ಭಾವಿಸಿದ್ದೇನೆ.

ನಿಮ್ಮ ವಿಶ್ವಾಸಿ,
ಡಿ.ಆರ್.ಗಾಡ್ಗಿಲ್

ಶ್ರೀ ಜಿ.ಮಾದೇಗೌಡ
ಚೀಫ್ ಪ್ರಮೋಟರ್
ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ.)
ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು,
ಮೈಸೂರು ರಾಜ್ಯ.



D.R. Gadgil,
Dy. Chairman,

योजना आयोग
नई दिल्ली
PLANNING COMMISSION
NEW DELHI

November 25, 1967.

Dear Sir,

I have to thank you for your letter of the 18th November. I was glad to hear of your efforts at establishing a cooperative sugar factory in Mandya District. The question of issuing further licences for sugar factories is under the consideration of the Ministry of Food and Agriculture. I hope that with the active sponsorship of the authorities of Mysore State your effort in the direction of getting a licence will succeed.

Yours truly,

(D.R. Gadgil )

Shri G. Made Gowda,
Chief Promoter,
Bharathi Sahakara Sakkare Karkhane Ltd.,
K.M. Doddi, Maddur Taluk,
(Mysore State).

---

ಕೇಂದ್ರ ಮತ್ತು ರಾಜ್ಯ ಸರ್ಕಾರಗಳಲ್ಲಿ ಪ್ರಮುಖವಾದ ಅಧಿಕಾರ ಸ್ಥಾನಗಳಲ್ಲಿದ್ದ ವ್ಯಕ್ತಿಗಳೆಲ್ಲರ ಮನಸ್ಸಿಗೆ ಗ್ರಾಮಾಂತರ ಪ್ರದೇಶವಾದ ಕಾಳಮುದ್ದನ ದೊಡ್ಡಿಯಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಯೊಂದರ ಸ್ಥಾಪನೆಯ ಅಗತ್ಯದ ಬಗ್ಗೆ ಸದಭಿಪ್ರಾಯವನ್ನು ಮೂಡಿಸುವುದರಲ್ಲಿಯೇ, ಇಷ್ಟು ದೀರ್ಘಕಾಲ ಕಳೆದು ಹೋಗುತ್ತಿರುವುದು ಜಿ.ಮಾದೇಗೌಡರಲ್ಲಿ ತುಂಬಾ ಉದ್ವೇಗವನ್ನುಂಟು ಮಾಡತೊಡಗಿತು. ಈಗಾಗಲೇ ತಿಳಿಸಿರುವಂತೆ ಭರತಖಂಡದ ಆರ್ಥಿಕ ಸ್ಥಿತಿಗತಿಗಳು ಈ ಅವಧಿಯಲ್ಲಿ ಬಹಳ ಸಂದಿಗ್ಧ ಸ್ಥಿತಿಯಲ್ಲಿದ್ದುದರಿಂದ

ಕೇಂದ್ರ ಸರ್ಕಾರವು ದೇಶದ ಉದ್ದಗಲದಲ್ಲಿ ಯಾವುದೇ ಹೊಸ ಕಾರ್ಖಾನೆಗಳ ಸ್ಥಾಪನೆಗೆ ಲೈಸೆನ್ಸ್ ನೀಡುವ ವಿಷಯದಲ್ಲಿ "ಪರಿಶೀಲಿಸಲಾಗುತ್ತಿದೆ" ಎಂಬ ಉತ್ತರದ ಮೂಲಕ, ವಿಳಂಬ ನೀತಿಯನ್ನು ಅನುಸರಿಸುತ್ತಿತ್ತು. ಇಂತಹ ವಿಳಂಬದಿಂದ ಹತಾಶರಾಗದೆ, ತಮ್ಮ ಗುರಿಯನ್ನು ಸಾಧಿಸುವ ತನಕ ಜಿ.ಮಾದೇಗೌಡರು ಒಂದೊಂದೇ ಹೆಜ್ಜೆಗಳನ್ನು ದೃಢವಾಗಿ ಇಡುತ್ತಾ, ತಮ್ಮ ಪ್ರಯತ್ನಗಳನ್ನು ಮುಂದುವರಿಸಿದರು.

ಕೇಂದ್ರ ಸರ್ಕಾರದ ಮೇಲೆ ಬಹಳ ಪ್ರಭಾವ ಬೀರಬಲ್ಲಂಥ ರಾಷ್ಟ್ರೀಯ ಮಟ್ಟದ ನಾಯಕರಾಗಿದ್ದ ಶ್ರೀ ಕೆಂಗಲ್‌ಹನುಮಂತಯ್ಯನವರಿಗೆ ಮತ್ತೆ ಪತ್ರವನ್ನು ಬರೆದು, ಕೈಗಾರಿಕಾ ಲೈಸೆನ್ಸ್ ಪಡೆಯುವುದರ ಬಗ್ಗೆ ನೆರವು ನೀಡಬೇಕೆಂದು ವಿನಂತಿಸಿಕೊಂಡರು. ಅದಕ್ಕೆ ಉತ್ತರವಾಗಿ ಅವರು ಶ್ರೀ ಜಿ.ಮಾದೇಗೌಡರಿಗೆ ಈ ರೀತಿ ಪತ್ರ ಬರೆಯುತ್ತಾರೆ.

---

## ಪತ್ರ - 7

ಅಧ್ಯಕ್ಷರು,
ಆಡಳಿತಾತ್ಮಕ ಸುಧಾರಣಾ ಆಯೋಗ
ಭಾರತ ಸರ್ಕಾರ, ನವ ದೆಹಲಿ
ದಿನಾಂಕ 8, ಡಿಸೆಂಬರ್1967

**ಆತ್ಮೀಯರಾದ ಶ್ರೀ ಮಾದೇಗೌಡ,**

ಭಾರತ ಸರ್ಕಾರದ ಆಹಾರ ಮತ್ತು ಕೃಷಿ ಸಚಿವರಾದ ಶ್ರೀ ಜಗಜೀವನರಾಮ್ ಅವರ ಪರಾಮರ್ಶೆಗಾಗಿ ನೀವು ದಿನಾಂಕ 4-12-67ರಂದು ಬರೆದ ಪತ್ರ ಮತ್ತು ಅದರ ಜೊತೆಗಿದ್ದ ದಾಖಲೆಗಳನ್ನು ಅವರಿಗೆ ಕಳುಹಿಸಿ ಕೊಟ್ಟಿರುತ್ತೇನೆ.

ತಮ್ಮ ವಿಶ್ವಾಸಿ,
ಕೆ.ಹನುಮಂತಯ್ಯ

**ಶ್ರೀ ಜಿ.ಮಾದೇಗೌಡ**, ಬಿ.ಎ., ಬಿ.ಎಲ್.,ಎಂ.ಎಲ್.ಎ.,
ಚೀಫ್ ಪ್ರಮೋಟರ್,
ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ.),
ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು,
ಮೈಸೂರು ರಾಜ್ಯ.



अध्यक्ष
भारत सरकार
प्रशासनिक सुधार आयोग
CHAIRMAN
GOVERNMENT OF INDIA
ADMINISTRATIVE REFORMS COMMISSION

नई दिल्ली
NEW DELHI
December 8, 1967.

My dear Shri Made Gowd,

Your letter, dated 4th December 1967 and the enclosures. I am sending them to Shri Jagjivan Ram, Minister for Food and Agriculture, Govt. of India, for consideration.

Yours sincerely,
K. Hanumanthaiya
(K.Hanumanthaiya)

Shri G. Made Gowda, BA.,BL., MLA.,
Chief Promoter,
Bharathi Sahakara Sakkare Karkhane Ltd.
K.M.Doddi.
(Maddur Taluk, Mysore State).

---

ಇತ್ತ ಜಿ.ಮಾದೇಗೌಡರಿಗೆ ಪತ್ರದಲ್ಲಿ ತಿಳಿಸಿದ್ದಂತೆಯೇ, ಅತ್ತ ಕೇಂದ್ರ ಸಚಿವರಾದ ಶ್ರೀ ಜಗಜೀವನ ರಾಮ್ ಅವರಿಗೆ ಪತ್ರವನ್ನು ಬರೆದು ಜಿ.ಮಾದೇಗೌಡರ ಪ್ರಯತ್ನಕ್ಕೆ ನೆರವು ನೀಡಬೇಕೆಂದು ಪ್ರಾರ್ಥಿಸುತ್ತಾರೆ.

---

## ಪತ್ರ - 8

ಅಧ್ಯಕ್ಷರು
ಆಡಳಿತಾತ್ಮಕ ಸುಧಾರಣಾ ಆಯೋಗ
ಭಾರತ ಸರ್ಕಾರ, ನವ ದೆಹಲಿ
ದಿನಾಂಕ 8, ಡಿಸೆಂಬರ್ 1967

ಆತ್ಮೀಯರಾದ ಶ್ರೀ ಜಗಜೀವನರಾಮ್‌ಜಿ,

ಮೈಸೂರಿನಿಂದ ಶ್ರೀ ಜಿ.ಮಾದೇಗೌಡ ಎಂ.ಎಲ್.ಎ., ಅವರು ಕಳುಹಿಸಿರುವ ಪತ್ರ ಮತ್ತು ದಾಖಲೆಗಳನ್ನು ಈ ಮೂಲಕ ತಮಗೆ ಕಳುಹಿಸುತ್ತಿದ್ದೇನೆ. ಈ ಸಕ್ಕರೆ

ಕಾರ್ಖಾನೆಯ ಸ್ಥಾಪನೆಗಾಗಿ ಅವರು ಬಹಳ ಕಾಲದಿಂದಲೂ ಪ್ರಯತ್ನಿಸುತ್ತಲೇ ಇದ್ದಾರೆ. ತಾವು ಈ ಬಗ್ಗೆ ಅವರಿಗೆ ನೆರವು ನೀಡಿದಲ್ಲಿ ನನಗೆ ಬಹಳ ಸಂತೋಷವೆನಿಸುತ್ತದೆ.

ಗೌರವಗಳೊಂದಿಗೆ

ತಮ್ಮ ವಿಶ್ವಾಸಿ,
ಕೆ.ಹನುಮಂತಯ್ಯ

ಶ್ರೀ ಜಗಜೀವನರಾಮ್,
ಆಹಾರ, ಕೃಷಿ, ಸಮುದಾಯ ಅಭಿವೃದ್ಧಿ ಮತ್ತು ಸಹಕಾರ ಸಚಿವರು,
ಭಾರತ ಸರ್ಕಾರ, ನವ ದೆಹಲಿ.




अध्यक्ष
भारत सरकार
प्रशासनिक सुधार आयोग
CHAIRMAN
GOVERNMENT OF INDIA
ADMINISTRATIVE REFORMS COMMISSION

नई दिल्ली
NEW DELHI
December 8, 1967.

My dear Shri Jagjivan Ramji,

I am herewith sending a letter and its enclosures I have received from Shri G. Made Gowda, M.L.A., from Mysore. He has been asking for this Sugar Factory for a long time. I wonder if you could help him for which I would feel happy.

With kind regards,

Yours sincerely,

Sd/-

(K.Hanumanthaiya)

Shri Jagjivan Ram,
Minister for Food, Agriculture,
Community Development & Co-operation,
Govt. of India,
New Delhi.

ಕೇಂದ್ರ ಸಚಿವರಾದ ಶ್ರೀ ಜಗಜೀವನರಾಮ್ ಅವರು ಮೇಲ್ಕಂಡ ಪತ್ರಕ್ಕೆ ಕೂಡಲೇ ಪ್ರತಿಕ್ರಿಯಿಸುತ್ತಾ, ದಿನಾಂಕ 20 ಡಿಸೆಂಬರ್ 67ರಂದು ಜಿ.ಮಾದೇಗೌಡರಿಗೆ ಮತ್ತು ದಿನಾಂಕ 21 ಡಿಸೆಂಬರ್ 67ರಂದು ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ಪತ್ರಗಳ್ನು ಬರೆದು, ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಅತ್ಯಧಿಕ ಮೊತ್ತದ ಬಂಡವಾಳದ ಬಗ್ಗೆ ಮತ್ತೆ ಪ್ರಸ್ತಾಪ ಮಾಡುತ್ತಾರೆ. ಬಂಡವಾಳ ಶೇಖರಣೆಯ ಬಗೆಗೆ ಜಿ.ಮಾದೇಗೌಡರಿಂದ ಮತ್ತಷ್ಟು ವಿವರಗಳನ್ನು ಅಪೇಕ್ಷಿಸುತ್ತಾರೆ.

---

## ಪತ್ರ - 9

ಡಿ.ಓ.ನಂ.25(450)/67-ಎಸ್.ಟಿ.
ಆಹಾರ ಮತ್ತು ಕೃಷಿ ಸಚಿವರು,
ಭಾರತ ಸರ್ಕಾರ, ನವ ದೆಹಲಿ
ದಿನಾಂಕ 20, ಡಿಸೆಂಬರ್ 1967

*ಪ್ರಿಯ ಶ್ರೀ ಗೌಡ,*

ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಕಾಳಮುದ್ದನ ದೊಡ್ಡಿಯಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಸಂಬಂಧಿಸಿದಂತೆ ದಿನಾಂಕ 4ನೆಯ ಡಿಸೆಂಬರ್1967ರ ನಿಮ್ಮ ಪತ್ರವನ್ನು ಗಮನಿಸಿದ್ದೇವೆ.

ಈಗಾಗಲೇ ಲೈಸನ್ಸ್ ನೀಡಿರುವ ಹೊಸ ಸಹಕಾರ ಸಕ್ಕರೆ ಕಾರ್ಖಾನೆಗಳಿಗೆ ದೀರ್ಘಕಾಲಿಕ ಸಾಲದ ಅಗತ್ಯಗಳನ್ನು ಪೂರೈಸಲು ಇದುವರೆವಿಗೂ ಸಾಧ್ಯವಾಗಿಲ್ಲ. ಆದ್ದರಿಂದ ಸಹಕಾರ ಸಕ್ಕರೆ ಕಾರ್ಖಾನೆಗಳ ಪ್ರವರ್ತಕರು ತಮ್ಮ ಯೋಜನೆಗಳಿಗೆ ಐ.ಎಫ್.ಸಿ./ಐ.ಡಿ.ಬಿ.ಐ.ಗಳಂಥ ಹಣಕಾಸಿನ ನಿಗಮಗಳನ್ನು ಬಿಟ್ಟು, ಬೇರೆ ಮೂಲಗಳಿಂದ ಬಂಡವಾಳ ತೊಡಗಿಸದ ಹೊರತು, ಸದ್ಯದಲ್ಲಿ ನಾವು ಯಾವುದೇ ಹೆಚ್ಚಿನ ಕಾರ್ಖಾನೆಗಳಿಗೆ ಲೈಸೆನ್ಸ್ ನೀಡುತ್ತಿಲ್ಲ. ನಿಮ್ಮ ಉದ್ದೇಶಿತ ಸಹಕಾರ ಸಂಸ್ಥೆಯು ತನಗೆ ಅಗತ್ಯವಾದ ಬಂಡವಾಳವನ್ನು ಐ.ಎಫ್.ಸಿ./ಐ.ಡಿ.ಬಿ.ಐ.ಗಳನ್ನು ಹೊರತು ಪಡಿಸಿ, ಬೇರೆ ಕಡೆಗಳಿಂದ ಪಡೆಯುವುದೋ? ಇಲ್ಲವೋ? ಎಂಬುದು ನನಗೆ ತಿಳಿದು ಬಂದಿಲ್ಲ.

ತಮ್ಮ ವಿಶ್ವಾಸಿ,
ಜಗಜೀವನ ರಾಮ್

**ಶ್ರೀ ಜಿ.ಮಾದೇಗೌಡ,** ಬಿ.ಎ.,ಎಂ.ಎಲ್.ಎ.,
ಚೀಫ್ ಪ್ರಮೋಟರ್,
ಭಾರತಿ ಸಹಕಾರ ಸಕ್ಕರೆ ಕಾರ್ಖಾನೆ (ನಿ.),
ಕೆ.ಎಂ.ದೊಡ್ಡಿ, ಮದ್ದೂರು ತಾಲ್ಲೂಕು,
ಮೈಸೂರು ರಾಜ್ಯ.



D.O.No.25(450)/67-ST

MINISTER FOR
FOOD & AGRICULTURE,
GOVT. OF INDIA.

New Delhi, the 20th Dec.'67.

Dear Shri Gowda,

Please refer to your letter dated the 4th December,1967 regarding the establishment of a cooperative sugar factory at K.M. Doddi, Maddur Taluk, District Mandya.

So far it has not been possible to meet the long term loan requirements of the new cooperative sugar factories already licensed. We are therefore not licensing at present any more factories unless the promotors are able to finance their schemes from sources other than IFC/IDBI. I do not know whether the proposed cooperative will find the necessary finance from sources other than IFC/IDBI.

Yours sincerely,

Jagjivan Ram

(Jagjivan Ram)

Shri G. Made Gowda, M.L.A.,
Chief Promoter,
Bharathi Sahakara Sakkare Karkhane Ltd.,
K.M. Doddi, Maddur Taluk,
District Mandya (Mysore State)

# ಪತ್ರ - 10

ಡಿ.ಓ.ನಂ.ಎಫ್.25/450/67ಎಸ್.ಟಿ.
ಆಹಾರ ಮತ್ತು ಕೃಷಿ ಸಚಿವರು,
ಭಾರತ ಸರ್ಕಾರ, ನವ ದೆಹಲಿ,
ದಿನಾಂಕ 21, ಡಿಸೆಂಬರ್1967.

ಆತ್ಮೀಯರಾದ ಶ್ರೀ ಹನುಮಂತಯ್ಯನವರಿಗೆ,

ಮೈಸೂರು ರಾಜ್ಯದ, ಮಂಡ್ಯ ಜಿಲ್ಲೆಯ, ಮದ್ದೂರು ತಾಲ್ಲೂಕಿನ, ಕೆ.ಎಂ.ದೊಡ್ಡಿಯಲ್ಲಿ ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವ ಬಗ್ಗೆ ದಿನಾಂಕ 8-12-67ರಂದು ನೀವು ಬರೆದ ಪತ್ರವನ್ನು ಗಮನಿಸಿದ್ದೇವೆ.

ತಮಗೆ ತಿಳಿದಿರುವಂತೆ, ಒಂದು ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಸುಮಾರು ಎರಡು ಕೋಟಿ ರೂ.ಗಳಿಗೂ ಅಧಿಕವಾದ ಬಂಡವಾಳದ ಅಗತ್ಯವಿರುತ್ತದೆ. ಅಲ್ಲದೇ, ಇದರ ಬಹುಪಾಲು ಹಣವು, ಹಣಕಾಸು ನಿಗಮಗಳಾದ ಐ.ಎಫ್.ಸಿ.ಮುಂತಾದವುಗಳ ಮೂಲಕ ಬರಬೇಕಾಗುತ್ತದೆ. ಇಂತಹ ಹಣಕಾಸು ನಿಗಮಗಳ ಬಂಡವಾಳ ಸಂಗ್ರಹಣೆಗೆ ಸೀಮಿತವಾದ ಮೂಲಗಳಿರುವುದಿಂದ, ಈಗಾಗಲೇ ಲೈಸೆನ್ಸ್ ಪಡೆದಿರುವಂತಹ ಸಕ್ಕರೆ ಕಾರ್ಖಾನೆಗಳಿಗೆ ಸಾಲದ ಅಗತ್ಯಗಳನ್ನು ಇವುಗಳಿಂದ ಪೂರೈಸಲಾಗುತ್ತಿಲ್ಲ. ಆದ್ದರಿಂದ ಐ.ಎಫ್.ಸಿ./ಐ.ಡಿ.ಬಿ.ಐ., ಹಣಕಾಸಿನ ನಿಗಮಗಳನ್ನು ಹೊರತುಪಡಿಸಿ, ಸದ್ಯದಲ್ಲಿ ಹೊಸ ಕಾರ್ಖಾನೆಗಳಿಗೆ ಲೈಸೆನ್ಸ್ ಅನ್ನು ನೀಡುತ್ತಿಲ್ಲ. ಪ್ರಸ್ತಾಪದಲ್ಲಿರುವ ಸಹಕಾರ ಸಂಸ್ಥೆಯು ಸೂಕ್ತ ಬಂಡವಾಳವನ್ನು ಸಂಗ್ರಹಿಸುವುದರ ಬಗ್ಗೆ ಖಚಿತವಾಗಿ ನನಗೇನು ತಿಳಿದಿಲ್ಲ. ಈ ರೀತಿ ಬಂಡವಾಳ ವ್ಯವಸ್ಥೆ ಮಾಡಿಕೊಳ್ಳುವುದಾದಲ್ಲಿ, ಲೈಸೆನ್ಸ್ ನೀಡುವ ಬಗ್ಗೆ ಯಾವುದೇ ತಕರಾರು ಇರುವುದಿಲ್ಲ.

ತಮ್ಮ ವಿಶ್ವಾಸಿ,
ಜಗಜೀವನ ರಾಮ್

ಶ್ರೀ ಕೆ.ಹನುಮಂತಯ್ಯ, ಎಂ.ಪಿ.,
ಅಧ್ಯಕ್ಷರು,
ಆಡಳಿತಾತ್ಮಕ ಸುಧಾರಣಾ ಆಯೋಗ,
ನವ ದೆಹಲಿ.



D.O.No.F.25(450)/67-ST
MINISTER FOR
FOOD & AGRICULTURE,
GOVT. OF INDIA.
New Delhi, the 21st Dec.'67.

Dear Shri Hanumanthaiya

Please refer to your letter dated the 8th December,1967, regarding the establishment of a cooperative sugar factory at K.M. Doddi, Maddur Taluk, Distt. Mandya (Mysore State).

As you may be aware, the establishment of a cooperative sugar factory requires an investment of over Rs. 2 crores and the bulk of this has to come from financing institutions such as the IFC. Due to the limited resources position of these financial institutions it has not so far been possible to meet the loan requirements of the cooperative sugar factories already licensed. Therefore, more factories are not being licensed at present unless they are able to obtain the finance from sources other than IFC/IDBI. I am not sure whether this cooperative can arrange the necessary finance. If it does, there will be no objection in issuing the licence.

Yours sincerely,
Jagjivan Ram
(Jagjivan Ram)

Shri K. Hanumanthaiya, M.P.
Chairman,
Administrative Reforms Commission,
New Delhi.

---

ಕೇಂದ್ರ ಸಚಿವರಾದ ಶ್ರೀ ಜಗಜೀವರಾಮ್ ಅವರು ಶ್ರೀ ಕೆಂಗಲ್ ಹನುಮಂತಯ್ಯನವರಿಗೆ ಬರೆದಿದ್ದ ಪತ್ರದಲ್ಲಿ ಉದ್ದೇಶಿತ ಸಹಕಾರ ಸಂಸ್ಥೆಯು ಐ.ಎಫ್.ಸಿ./ಐ.ಡಿ.ಬಿ.ಐ. ಹಣಕಾಸಿನ ನಿಗಮಗಳನ್ನು ಹೊರತುಪಡಿಸಿ, ಸೂಕ್ತ ಬಂಡವಾಳವನ್ನು ವ್ಯವಸ್ಥೆ ಮಾಡಿಕೊಳ್ಳುವುದಾದಲ್ಲಿ, ಲೈಸೆನ್ಸ್ ನೀಡುವ ಬಗ್ಗೆ ಯಾವುದೇ ತಕರಾರು ಇರುವುದಿಲ್ಲ ಎಂಬ ಆಶ್ವಾಸನೆಯನ್ನು ನೀಡಿದ್ದು, ಜಿ.ಮಾದೇಗೌಡರ ಪಾಲಿಗೆ ದೊಡ್ಡ ಆಶಾಕಿರಣವಾಗಿ ಕಂಡಿತು. ದಿನಾಂಕ 1-5-64ರಲ್ಲಿ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲೆಂದು ಕೇಂದ್ರ ಸರ್ಕಾರಕ್ಕೆ ತಾವು ನೀಡಿದ್ದ

ಅರ್ಜಿಗೆ ದೊರೆತ ಮೊದಲ ಗ್ರೀನ್ ಸಿಗ್ನಲ್ ಇದಾಗಿತ್ತು. ನಿರಂತರವಾದ ಪ್ರಯತ್ನಗಳಿಂದ ಹೋರಾಡುತ್ತಿದ್ದ ಜಿ.ಮಾದೇಗೌಡರಿಗೆ ಕೇಂದ್ರ ಸಚಿವರ ಈ ಭರವಸೆಯು ಮತ್ತಷ್ಟು ಶಕ್ತಿಯನ್ನು ನೀಡಿತು.

ಬ್ರಿಟಿಷ್ ಇಂಡಿಯಾ ಕಾರ್ಪೊರೇಷನ್ನಿಗೆ ಸೇರಿದ ಸಕ್ಕರೆ ಉದ್ಯಮದಲ್ಲಿ ತಾಂತ್ರಿಕ ಸಲಹೆಗಾರರಾಗಿದ್ದ ಶ್ರೀ ಎಸ್.ಎನ್.ನಂಜುಂಡರಾವ್ ಎಂಬುವರು, ಈ ಸಂದರ್ಭದಲ್ಲಿ ಒಂದು ಸಲಹೆಯನ್ನು ಮಾದೇಗೌಡರಿಗೆ ನೀಡುತ್ತಾರೆ. ಅದೇನೆಂದರೆ ಉತ್ತರ ಇಂಡಿಯಾದ ಅನೇಕ ರಾಜ್ಯಗಳಲ್ಲಿ ಈಗಾಗಲೇ ಖಾಸಗಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಿರುವ ಶ್ರೀಮಂತ ಕೈಗಾರಿಕೋದ್ಯಮಿಗಳು ತಮ್ಮಲ್ಲಿ ಅರೆಯಲು ಸಾಕಷ್ಟು ಕಬ್ಬು ದೊರೆಯದೆ, ಲಾಭದಾಯಕವಾಗಿ ಕಾರ್ಖಾನೆಯನ್ನು ನಡೆಸಲಾಗದೆ ಪರಿತಪಿಸುತ್ತಿದ್ದಾರೆ. ಇಂತಹ ಖಾಸಗಿ ಸಕ್ಕರೆ ಕಾರ್ಖಾನೆಗಳ ಮಾಲೀಕರು ವರ್ಷದಲ್ಲಿ ಎಂಟು ತಿಂಗಳು ಅರೆಯುವುದಕ್ಕೆ ಕಬ್ಬು, ನೀರು ಮತ್ತು ವಿದ್ಯುಚ್ಛಕ್ತಿಯ ಸೌಲಭ್ಯವಿರುವ ಪ್ರದೇಶಕ್ಕೆ ತಮ್ಮ ಕಾರ್ಖಾನೆಗಳ್ನು ವರ್ಗಾಯಿಸಲು ಪ್ರಯತ್ನಿಸುತ್ತಿದ್ದಾರೆ. ಇಂತಹವರನ್ನು ಸಂಪರ್ಕಿಸಿ, ಕಾಳಮುದ್ದನ ದೊಡ್ಡಿಗೆ ತಮ್ಮ ಕಾರ್ಖಾನೆಯನ್ನು ಸ್ಥಳಾಂತರಿಸಿಕೊಳ್ಳುವಂತೆ ಕೇಳಿಕೊಳ್ಳುವುದು ಸೂಕ್ತವೆಂದು ಸಲಹೆ ನೀಡಿದರು.

ರೈತ ಸಮುದಾಯದ ಸರ್ವತೋಮುಖವಾದ ಅಭಿವೃದ್ಧಿಗೆ ಸಹಕಾರಿ ಕ್ಷೇತ್ರದ ಸಕ್ಕರೆ ಕಾರ್ಖಾನೆಯೇ ಅತ್ಯುತ್ತಮವೆಂದು ದೃಢವಾಗಿ ನಂಬಿದ್ದ ಮಾದೇಗೌಡರು, ಈಗ ವಿಧಿಯಿಲ್ಲದೆ ಎಂತಾದರೂ ಮಾಡಿ, ಒಂದು ಸಕ್ಕರೆ ಕಾರ್ಖಾನೆಯನ್ನು ಕಾಳಮುದ್ದನ ದೊಡ್ಡಿಯಲ್ಲಿ ಸ್ಥಾಪಿಸಲೇಬೇಕೆಂಬ ಉದ್ದೇಶದಿಂದ ಖಾಸಗಿ ಸಕ್ಕರೆ ಕಾರ್ಖಾನೆಯ ಮಾಲೀಕರ ಮೊರೆ ಹೋಗಲು ನಿರ್ಧರಿಸಿದರು. ಖಾಸಗಿಯೋ ಅಥವಾ ಸರ್ಕಾರಿಯೋ ಅಥವಾ ಸಹಕಾರಿಯೋ, ಒಟ್ಟಿನಲ್ಲಿ ಕಾಳಮುದ್ದನ ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆಯೊಂದು ಸ್ಥಾಪನೆಗೊಂಡು, ಈ ಭಾಗದ ನೂರಾರು ಹಳ್ಳಿಗಳಲ್ಲಿರುವ ಲಕ್ಷಾಂತರ ರೈತರ ಆರ್ಥಿಕ ಬದುಕು ಅಭಿವೃದ್ಧಿ ಗೊಳ್ಳುವಂಥ ಶಾಶ್ವತವಾದ ಕಾರ್ಯವನ್ನು ಮಾಡಲು ಮಾದೇಗೌಡರ ಮನಸ್ಸು ಹಗಲಿರುಳು ಚಿಂತಿಸುತ್ತಿತ್ತು. ಎಸ್.ಎನ್.ನಂಜುಂಡರಾವ್ ಅವರ ಸಲಹೆಯಂತೆ, ಕೂಡಲೇ ಈ ಮುಂದೆ ಕಾಣಿಸಿರುವ ಖಾಸಗಿ ಸಕ್ಕರೆ ಕಾರ್ಖಾನೆಗಳೊಡನೆ ಪತ್ರ ವ್ಯವಹಾರವನ್ನು ಪ್ರಾರಂಭಿಸಿ, ಕಾಳಮುದ್ದನ ದೊಡ್ಡಿಯ ಪರಿಸರದಲ್ಲಿ ಸಕ್ಕರೆ ಉದ್ಯಮಕ್ಕೆ ಲಭಿಸುವ ಎಲ್ಲಾ ಬಗೆಯ ಅನುಕೂಲಗಳನ್ನು ವಿವರಿಸಿ, ಸ್ಥಳದ ಪರಿಶೀಲನೆಗಾಗಿ ಆಹ್ವಾನಿಸಿದರು.

1. M/s. Godavari Sugar Mills Ltd.,
   Fazalbhoy Building, Mahatma Gandhi Road, Fort,
   Post Box No. 122 -A, Bombay - 1.
2. Shree Changdeo Sugar Mills Ltd., Bombay - 1
3. M/s.Kamalpat Motilal Motinagar Sugar Mills,
   Motinagar, Uttar pradesh.

4. Kothari and Sons, Madras.
5. Saraswathi Sugar Mills, Yamunanagar, Panjab.
6. Rohtas Industries Ltd., Dalmina Nagar, Bihar.

ಈ ಮೇಲ್ಕಂಡ ಸಕ್ಕರೆ ಉದ್ಯಮ ಸಂಸ್ಥೆಗಳ ಜೊತೆಗೆ, ಇನ್ನು ಅನೇಕ ಕೈಗಾರಿಕೋದ್ಯಮಿಗಳಿಗೆ ಪತ್ರಗಳನ್ನು ಬರೆದು, ಅವರೆಲ್ಲರ ಗಮನವನ್ನು ಕರ್ನಾಟಕ ರಾಜ್ಯದ ಕಡೆಗೆ ಸೆಳೆಯಲು ಪ್ರಯತ್ನಿಸಿದರು.

ಅಹಮದಾಬಾದ್‌ನ ಗೋದಾವರಿ ಸಕ್ಕರೆ ಕಾರ್ಖಾನೆಯ ಶ್ರೀ ಪಿ.ಎಂ.ಕವಾಡಿಯ ಎಂಬ ಅಧಿಕಾರಿಯು ಕಾಳಮುದ್ದನ ದೊಡ್ಡಿಗೆ ಬಂದು, ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಸಕಲ ಸೌಲಭ್ಯಗಳಿರುವುದನ್ನು ಕಂಡು ಸಂತೋಷಪಟ್ಟರಾದರೂ, ತಮ್ಮ ಕಾರ್ಖಾನೆಯನ್ನು ಇಷ್ಟು ದೂರಕ್ಕೆ ಸ್ಥಳಾಂತರಿಸಲು ಅಸಾಧ್ಯವೆಂದು ತಿಳಿಸಿ, ಹಿಂತಿರುಗಿದರು. ಇನ್ನಿತರ ಒಂದೆರಡು ಕಾರ್ಖಾನೆಗಳ ಮಾಲೀಕರು, ತಾವು ತೀವ್ರವಾದ ಹಣಕಾಸಿನ ಮುಗ್ಗಟ್ಟನ್ನು ಎದುರಿಸುತ್ತಿರುವುದರಿಂದ, ಕಾರ್ಖಾನೆಗಳನ್ನೇ ಸಂಪೂರ್ಣವಾಗಿ ಮಾರಾಟ ಮಾಡಲು ಸಿದ್ಧರಾಗಿರುವುದಾಗಿ ತಿಳಿಸಿದರು.

ಇದೇ ವೇಳೆಯಲ್ಲಿ TEKNOWARKS (India)ಎಂಬ ಕಂಪನಿಯವರು ಸಣ್ಣ ಪ್ರಮಾಣದ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಯಂತ್ರೋಪಕರಣಗಳನ್ನು ತಯಾರಿಸಿ, ಮಾರುಕಟ್ಟೆಗೆ ಬಿಟ್ಟಿದ್ದರು. ಪ್ರತಿನಿತ್ಯ ಮುನ್ನೂರರಿಂದ ನಾಲ್ಕು ನೂರು ಟನ್ನುಗಳಷ್ಟು ಕಬ್ಬನ್ನು ಅರೆಯುವ ಸಾಮರ್ಥ್ಯವನ್ನುಳ್ಳ ಈ ಕಾರ್ಖಾನೆಯ ಯಂತ್ರೋಪಕರಣಗಳ ಒಟ್ಟು ಬೆಲೆ ಇಪ್ಪತ್ತೈದು ಲಕ್ಷ ರೂಪಾಯಿಗಳು. ಸಣ್ಣ ಪ್ರಮಾಣದ ಇಂತಹ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಕೇಂದ್ರ ಸರ್ಕಾರ ನೀಡುವ ಕೈಗಾರಿಕಾ ಲೈಸೆನ್ಸ್ ಅಗತ್ಯವಿಲ್ಲ. ಯಂತ್ರೋಪಕರಣಗಳ ಖರೀದಿಗೆ ಮೊದಲು ಐದು ಲಕ್ಷ ರೂ.ಗಳನ್ನು ಕೊಟ್ಟರೆ ಸಾಕು. ಅನಂತರ ಐದು ಕಂತುಗಳಲ್ಲಿ ಉಳಿದ ಹಣವನ್ನು ಕಟ್ಟಬೇಕು. ಪತ್ರಿಕಾ ಜಾಹಿರಾತುಗಳ ಮೂಲಕ ಈ ವಿವರಗಳನ್ನು ತಿಳಿದ ಮಾದೇಗೌಡರು, ಇಂತಹ ಸಣ್ಣ ಪ್ರಮಾಣದ ಒಂದು ಸಕ್ಕರೆ ಕಾರ್ಖಾನೆಯನ್ನೇ ಕಾಳಮುದ್ದನ ದೊಡ್ಡಿಯಲ್ಲಿ ಸ್ಥಾಪಿಸಿ ಬಿಡೋಣವೆಂದು ಆಲೋಚಿಸಿದರು. ಆದರೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಸ್ಥಾಪನೆಯ ಪ್ರತಿಯೊಂದು ಹಂತದಲ್ಲಿಯೂ ಜಿ. ಮಾದೇಗೌಡರು ಸಕ್ಕರೆ ಉದ್ಯಮದಲ್ಲಿ ಅಪಾರವಾದ ಅನುಭವ ಜ್ಞಾನವನ್ನು ಪಡೆದಿದ್ದ ಎಸ್.ಎನ್.ನಂಜುಂಡರಾವ್ ಅವರ ಸಲಹೆಯನ್ನು ಪಡೆದು, ಮುಂದಿನ ಹೆಜ್ಜೆಯನ್ನು ಇಡುತ್ತಿದ್ದರು. ಈಗ ಕೂಡಲೇ ಬಾಂಬೆಯಲ್ಲಿದ್ದ Teknowarks (India) ಕಂಪನಿಗೆ ಪತ್ರವನ್ನು ಬರೆದು, ಅದರಿಂದ ಯಂತ್ರೋಪಕರಣಗಳ ಮತ್ತು ಹಣಕಾಸಿನ ಎಲ್ಲಾ ವಿವರಗಳನ್ನು ತರಿಸಿಕೊಂಡು, ಅವೆಲ್ಲವನ್ನು ಎಸ್.ಎನ್.ನಂಜುಂಡರಾವ್ ಅವರಿಗೆ ಅಂಚೆ ಮೂಲಕ ಕಳುಹಿಸಿ, ಈ ಬಗ್ಗೆ ಅವರ ಸಲಹೆಯನ್ನು ಕೇಳಿದರು.

ಕಾಳಮುದ್ದನ ದೊಡ್ಡಿಯ ಸುತ್ತಮುತ್ತಣ ರೈತ ಸಮುದಾಯದ ಆರ್ಥಿಕ ಅಭಿವೃದ್ಧಿಗೆ ಅಂತಹ ಸಣ್ಣ ಪ್ರಮಾಣದ ಕಾರ್ಖಾನೆಯಿಂದ ಯಾವುದೇ ಪ್ರಯೋಜನವಿಲ್ಲವೆಂದೂ, ದೊಡ್ಡ ಪ್ರಮಾಣದ ಕಾರ್ಖಾನೆಯನ್ನೇ ಸ್ಥಾಪಿಸುವ ಪ್ರಯತ್ನವನ್ನೇ ಮುಂದುವರಿಸುವಂತೆ ಎಸ್.ಎನ್.ನಂಜುಂಡರಾವ್ ಸಲಹೆಯನ್ನು ನೀಡಿದ್ದರಿಂದ, ಈಗ ಮತ್ತೆ ಮಾದೇಗೌಡರ ಮನಸ್ಸು ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಎರಡು ಕೋಟಿ ರೂ.ಗಳ ಬಂಡವಾಳ ಸಂಗ್ರಹಣೆಯ ಕಡೆಗೆ ತೊಡಗಿತು. ಆದರೆ ಅಂದಿನ ದಿನಗಳಲ್ಲಿ ಇಷ್ಟು ದೊಡ್ಡ ಮೊತ್ತದ ಹಣವನ್ನು ಸಂಗ್ರಹಿಸುವುದು ಅತ್ಯಂತ ಕ್ಲಿಷ್ಟಕರವಾದ ಕಾರ್ಯವಾಗಿತ್ತು.

ಭರತಖಂಡದ ಕೂಲಿಕಾರ ಬಡ ಜನತೆಯ ಮತ್ತು ರೈತ ಸಮುದಾಯದ ಶ್ರಮಪೂರ್ಣವಾದ ನೋವಿನ ಬದುಕನ್ನು ಚೆನ್ನಾಗಿ ಅರಿತಿದ್ದ ಶ್ರೀ ಜಗಜೀವನರಾಮ್ ಅವರು ಕೇಂದ್ರದಲ್ಲಿ ಕೃಷಿ ಸಚಿವರಾಗಿ ಅಧಿಕಾರದಲ್ಲಿ ಇದ್ದುದರಿಂದ, ಅವರ ಮುಂದೆ ತಮ್ಮ ಅಹವಾಲನ್ನು ಮತ್ತೆಮತ್ತೆ ಮಂಡಿಸುತ್ತಾ, ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಗೆ ಲೈಸೆನ್ಸ್ ಪಡೆಯಲು ಮಾದೇಗೌಡರು ತಮ್ಮ ಪ್ರಯತ್ನವನ್ನು ಮುಂದುವರಿಸಿದರು. ಈ ದಿಶೆಯಲ್ಲಿ ಮತ್ತೆ ಪತ್ರ ವ್ಯವಹಾರವನ್ನು ಮುಂದುವರಿಸಿ, ಕೇಂದ್ರ ಸರ್ಕಾರದ ವತಿಯಿಂದ ಕೈಗಾರಿಕಾ ಲೈಸೆನ್ಸ್‌ಗೆ ಮುನ್ನ ಕೊಡುವ 'Letter of Intent' ಅನ್ನು ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯ ಹೆಸರಿನಲ್ಲಿ ನೀಡಬೇಕೆಂದು ಕೋರಿಕೊಂಡರು. ಕೇಂದ್ರ ಸರ್ಕಾರದಿಂದ 'Letter of Intent' ಅನ್ನು ಪಡೆದುಕೊಂಡು, ಅದನ್ನು ಕರ್ನಾಟಕ ರಾಜ್ಯದಲ್ಲಿರುವ ಪ್ರಮುಖ ಬ್ಯಾಂಕ್‌ಗಳಿಗೆ ಮತ್ತು ದೊಡ್ಡ ದೊಡ್ಡ ಬಂಡವಾಳವನ್ನು ಹಾಕುವ ಕೈಗಾರಿಕೋದ್ಯಮಿಗಳಿಗೆ ತೋರಿಸಿ, ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಹಣವನ್ನು ಕ್ರೋಢೀಕರಿಸಬೇಕೆಂಬ ಉದ್ದೇಶವಿತ್ತು. ಆದರೆ ಕೇಂದ್ರ ಸರ್ಕಾರದ ವತಿಯಿಂದ ಮಾದೇಗೌಡರ ಪತ್ರಗಳಿಗೆ ಯಾವುದೇ ಬಗೆಯ ಪ್ರತಿಕ್ರಿಯೆಗಳು ದೊರೆಯಲಿಲ್ಲ.

ಹಣವನ್ನು ಸಂಗ್ರಹಿಸಲು ಅಸಾಧ್ಯವಾದಾಗ ಮಾದೇಗೌಡರು ಮತ್ತೊಂದು ಮಾರ್ಗದಲ್ಲಿ ಗುರಿಯನ್ನು ಸಾಧಿಸಲು ಮುನ್ನುಗಿದರು. ದಿನವೊಂದಕ್ಕೆ ಒಂದು ಸಾವಿರದ ಇನ್ನೂರೈವತ್ತು ಟನ್ ಕಬ್ಬನ್ನು ಅರೆಯುವ ಸಾಮರ್ಥ್ಯವುಳ್ಳ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಅಗತ್ಯವಾದ ಯಂತ್ರೋಪಕರಣಗಳನ್ನು ಸಾಲದ ರೂಪದಲ್ಲಿ ಪಡೆದು, ಅನಂತರ ಕಾರ್ಖಾನೆಯ ಉತ್ಪನ್ನ ಲಾಭದಲ್ಲಿ, ಕಂತುಗಳ ರೂಪದಲ್ಲಿ ಸಾಲವನ್ನು ತೀರಿಸುವ ಯೋಜನೆಯೊಂದನ್ನು ಹಾಕಿಕೊಂಡು ಈ ಕೆಳಕಂಡ ಇಂಜಿನಿಯರಿಂಗ್ ಕಾರ್ಪೊರೇಷನ್‌ಗಳ ಜೊತೆಯಲ್ಲಿ ವ್ಯವಹರಿಸಿದರು.

1. The Indian Sugar & General Engineering Corporation,
   Yamuna Nagar, Amala (Dist), Haryana.
2. Prem Engineering Works
   Rani Mill, Meerut (India).
3. The K.C.P.Ltd.,
   Mount Road, Madras.

4.Kay Iron Works Private Limited, Yamuna Nagar.

5. Binny 's Engineering Works Ltd.,
Meenambakkam, Madras.

ಕಂಪನಿಗಳ ವತಿಯಿಂದ ಕೂಡಲೇ ವಿವರವಾದ ಮಾಹಿತಿಗಳು ಮಾದೇಗೌಡರಿಗೆ ಲಭ್ಯವಾದವು.

ದಿನ ಒಂದಕ್ಕೆ ಒಂದು ಸಾವಿರದ ಇನ್ನೂರ ಐವತ್ತು ಟನ್ನುಗಳಷ್ಟು ಕಬ್ಬನ್ನು ಅರೆಯುವ ಸಾಮರ್ಥ್ಯವುಳ್ಳ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಅಗತ್ಯವಾದ ಯಂತ್ರೋಪಕರಣಗಳ ಅಂದಾಜು ಬೆಲೆ ಒಂದು ಕೋಟಿಗಿಂತಲೂ ಅಧಿಕವಾಗಿತ್ತು. ಇಷ್ಟು ದೊಡ್ಡ ಮೊತ್ತದ ಯಂತ್ರೋಪಕರಣಗಳನ್ನು ಸಾಲದ ರೂಪದಲ್ಲಿ ಸರಬರಾಜು ಮಾಡುವ ಕಂಪನಿಗಳು, ತಮ್ಮದೇ ಆದ ಹಲವಾರು ನಿಯಮಗಳನ್ನು ರೂಪಿಸಿಕೊಂಡಿದ್ದವು.

1. ಯಂತ್ರೋಪಕರಣಗಳ ಒಟ್ಟು ಬೆಲೆಯಲ್ಲಿ, ಶೇ.20ರಷ್ಟನ್ನು ಮೊದಲು ಕೊಡಬೇಕು.
2. ಎಂಟು ಅಥವಾ ಹತ್ತು ತಿಂಗಳ ಅವಧಿಯೊಳಗೆ, ಕೈಗಾರಿಕಾ ನಿವೇಶನದಲ್ಲಿ ಯಂತ್ರೋಪಕರಣಗಳನ್ನು ಜೊತೆಗೂಡಿಸಿ, ಕಾರ್ಖಾನೆಯ ಉತ್ಪಾದನೆಯನ್ನು ಪ್ರಾರಂಭಿಸಿದ ಐದು ವರ್ಷಗಳೊಳಗೆ, ಉಳಿದ ಸಾಲದ ಮೊತ್ತವನ್ನು ಸಮಾನ ಕಂತುಗಳಲ್ಲಿ ಹಿಂತಿರುಗಿಸ ಬೇಕು.
3. ಕಂಪನಿಯು ಕೊಡುವ ಸಾಲದ ಹಣಕ್ಕೆ I.D.B.I. ಅಥವಾ I.F.C. ಅಥವಾ L.I.C ಅಂತಹ ಬೃಹತ್ ಹಣಕಾಸಿನ ಸಂಸ್ಥೆಗಳು ಗ್ಯಾರಂಟಿಯನ್ನು ನೀಡಬೇಕು.
4. ಕೇಂದ್ರ ಸರ್ಕಾರದಿಂದ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಅಗತ್ಯವಾದ ಕೈಗಾರಿಕಾ ಲೈಸನ್ಸ್ ಅನ್ನು ಹೊಂದಿರಬೇಕು.

ಕಾಳಮುದ್ದನ ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆಯ ಸ್ಥಾಪನೆಗೆ ಯಾವುದೇ ನಿಟ್ಟಿನಲ್ಲಿ ಮುಂದೆ ಹೆಜ್ಜೆ ಇಡಬೇಕಾಗಿದ್ದರೂ, ಬಹು ಮುಖ್ಯವಾಗಿ ಕೇಂದ್ರ ಸರ್ಕಾರದಿಂದ ಕೈಗಾರಿಕಾ ಲೈಸೆನ್ಸ್ ಅನ್ನು ಮೊದಲು ಪಡೆಯುವುದೇ ಪ್ರಮುಖ ಹಂತವಾಗಿತ್ತು. ಆದರೆ ಅದು ಅಗಾಧವಾದ ಹಣದ ಸಂಗ್ರಹವಿಲ್ಲದೇ ಸಾಧ್ಯವಾಗಲಿಲ್ಲ.

ಈ ಅವಧಿಯಲ್ಲಿ ಶ್ರೀ ವೀರೇಂದ್ರ ಪಾಟೀಲರ ನೇತೃತ್ವದ ಕಾಂಗ್ರೆಸ್ ಸರ್ಕಾರವು ಕರ್ನಾಟಕ ರಾಜ್ಯದ ಅಧಿಕಾರ ಸೂತ್ರವನ್ನು ಹಿಡಿದಿತ್ತು. 1968ರಿಂದ 1971ರ ವರೆಗೆ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರೇಂದ್ರ ಪಾಟೀಲರು ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ನಾನಾ ಬಗೆಯ ರಚನಾತ್ಮಕ ಯೋಜನೆಗಳನ್ನು ರೂಪಿಸಿಕೊಂಡು, ಕಾರ್ಯರೂಪಕ್ಕೆ ತರಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದ್ದರು. ಕರ್ನಾಟಕ ರಾಜ್ಯದಲ್ಲಿ ಕೋಟಿಗಟ್ಟಲೆ ರೂಪಾಯಿಗಳ ಬಂಡವಾಳವನ್ನು ಹೂಡಿ, ವಿವಿಧ ಬಗೆಯ ಕಾರ್ಖಾನೆಗಳನ್ನು ಸ್ಥಾಪಿಸಲು ಮುಂದೆ ಬರುವ

ರಾಜ್ಯದ ಮತ್ತು ನೆರೆ ರಾಜ್ಯಗಳ ಕೈಗಾರಿಕೋದ್ಯಮಿಗಳಿಗೆ ಎಲ್ಲಾ ರೀತಿಯ ಪ್ರೋತ್ಸಾಹವನ್ನು ನೀಡುವುದಾಗಿ ಪ್ರಕಟಣೆಯನ್ನು ಹೊರಡಿಸಿದರು. ಕೈಗಾರಿಕೆಯ ಸ್ಥಾಪನೆಗೆ ಅಗತ್ಯವಾದ ಭೂಮಿ, ನೀರು ಮತ್ತು ವಿದ್ಯುಚ್ಛಕ್ತಿಯನ್ನು ಒದಗಿಸಿ ಕೊಡುವ ಭರವಸೆಯನ್ನು ಸರ್ಕಾರದ ವತಿಯಿಂದ ನೀಡಿದರು.

ಕರ್ನಾಟಕ ರಾಜ್ಯ ಸರ್ಕಾರದ ಇಂತಹ ಪ್ರಕಟಣೆಯಿಂದ ಆಕರ್ಷಿತರಾದ ತಮಿಳು ನಾಡಿನ ಸುಪ್ರಸಿದ್ಧ ಕೈಗಾರಿಕೋದ್ಯಮಿ ಶ್ರೀ ಎನ್.ಮಹಾಲಿಂಗಮ್ ಅವರು ಕರ್ನಾಟಕ ರಾಜ್ಯದ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರ ಮೂಲಕ ಜಿ.ಮಾದೇಗೌಡರನ್ನು ಸಂಪರ್ಕಿಸಿ, ಕಾಳಮುದ್ದನದೊಡ್ಡಿಯ ಪರಿಸರವು ಬೃಹತ್ ಸಕ್ಕರೆ ಕಾರ್ಖಾನೆಯೊಂದನ್ನು ಸ್ಥಾಪಿಸಲು ಸೂಕ್ತವಾದ ಸ್ಥಳವೇ ಅಥವಾ ಅಲ್ಲವೇ ಎಂಬುದನ್ನು ತಿಳಿಯಲು ಮುಂದಾದರು.

ಎನ್.ಮಹಾಲಿಂಗಮ್ ಅವರು ತಮಿಳು ನಾಡಿನ ಶ್ರೀ ಶಕ್ತಿ ಷುಗರ್ಸ್ ಲಿಮಿಟೆಡ್‌ನ ಛೇರ್ಮನ್ನರಾಗಿ, ಸಕ್ಕರೆ ಉದ್ಯಮದಲ್ಲಿ ಅಪಾರವಾದ ಅನುಭವವನ್ನು ಹೊಂದಿದ್ದರು. ಇವರು ತಮ್ಮ ಪ್ರತಿನಿಧಿಯಾಗಿ ಶ್ರೀ ಎನ್.ಚಂದಪ್ಪನವರನ್ನು ಕಾಳಮುದ್ದನ ದೊಡ್ಡಿಗೆ ಕಳುಹಿಸಿ ಇಲ್ಲಿನ ಉದ್ದೇಶಿತ ಸಕ್ಕರೆ ಕಾರ್ಖಾನೆಯ ಯೋಜನಾ ವಿವರಗಳನ್ನು ಮತ್ತು ಸ್ಥಳೀಯವಾಗಿ ಲಭಿಸುವ ಎಲ್ಲಾ ವಿಧವಾದ ಸಂಪನ್ಮೂಲಗಳ ಬಗೆಗಿನ ಮಾಹಿತಿಗಳನ್ನು ತರಿಸಿಕೊಂಡರು.

ಎನ್.ಚಂದಪ್ಪನವರು ಮೂಲತಃ ಕರ್ನಾಟಕ ರಾಜ್ಯದ ಹಾಸನ ಜಿಲ್ಲೆಯ ಚನ್ನರಾಯಪಟ್ಟಣದವರಾಗಿದ್ದು, ಈಗ ತಮಿಳುನಾಡಿನಲ್ಲಿ ನೆಲೆಸಿದ್ದರು. ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಲಿಮಿಟೆಡ್‌ನಲ್ಲಿ ತಾಂತ್ರಿಕ ನಿರ್ದೇಶಕರಾಗಿದ್ದು, ಸಕ್ಕರೆ ಉದ್ಯಮದಲ್ಲಿ ಅತ್ಯುತ್ತಮವಾದ ತಾಂತ್ರಿಕ ಪರಿಣಿತಿಯನ್ನು ಪಡೆದಿದ್ದರು. ಎನ್.ಚಂದಪ್ಪನವರಿಂದ ತರಿಸಿಕೊಂಡ ಮಾಹಿತಿಗಳೆಲ್ಲವನ್ನೂ ಕೂಲಂಕಷವಾಗಿ ಪರಾಮರ್ಶಿಸಿದ ಎನ್.ಮಹಾಲಿಂಗಮ್ ಅವರು ಕಾಳಮುದ್ದನ ದೊಡ್ಡಿಯಲ್ಲಿ ಬೃಹತ್ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಮುಂದೆ ಬಂದರು.

ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಎರಡನೆಯ ಘಟಕವಾಗಿ ಕಾಳಮುದ್ದನ ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಅಗತ್ಯವಾದ ಬಂಡವಾಳವನ್ನು ಹೂಡಲು ತಮ್ಮ ಅಭಿಲಾಷೆಯನ್ನು ವ್ಯಕ್ತಪಡಿಸಿ, ಉದ್ದೇಶಿತ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಕೇಂದ್ರ ಸರ್ಕಾರದಿಂದ ಪಡೆಯಲು ಯತ್ನಿಸುತ್ತಿರುವ ಕೈಗಾರಿಕಾ ಲೈಸೆನ್ಸ್ ಅನ್ನು ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಹೆಸರಿಗೆ ವರ್ಗಾಯಿಸುವಂತೆ ಕರ್ನಾಟಕ ಸರ್ಕಾರದ ಮೂಲಕ ಜಿ.ಮಾದೇಗೌಡರು ಮತ್ತು ಸಹ ಪ್ರವರ್ತಕರಲ್ಲಿ ವಿನಂತಿಸಿಕೊಂಡರು.

ಕಳೆದ ಹಲವಾರು ವರ್ಷಗಳಿಂದ ಸ್ಥಳೀಯ ರೈತರಿಂದ ಸಂಗ್ರಹಿಸುವ ಷೇರು ಹಣ ಮತ್ತು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಅಧೀನದಲ್ಲಿರುವ ಹಣಕಾಸು ಸಂಸ್ಥೆಗಳ ನೆರವಿನಿಂದ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಕಾಳಮುದ್ದನ ದೊಡ್ಡಿಯಲ್ಲಿ ಸ್ಥಾಪಿಸಬೇಕೆಂದು

ಬಹು ಬಗೆಗಳಲ್ಲಿ ಪ್ರಯತ್ನಿಸಿ, ಅಗತ್ಯವಾಗಿದ್ದ ಅಧಿಕ ಮೊತ್ತದ ಹಣವನ್ನು ಸಂಗ್ರಹಿಸಲಾಗದೆ ವಿಫಲರಾಗಿದ್ದ ಜಿ.ಮಾದೇಗೌಡರು ಮತ್ತು ಸಹ ಪ್ರವರ್ತಕರು ಈಗ ಸಭೆ ಸೇರಿ, ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯವರ ಬೇಡಿಕೆಯನ್ನು ಕೂಲಂಕಷವಾಗಿ ಚರ್ಚಿಸಿದರು.

1962ರಲ್ಲಿ ನಡೆದಿದ್ದ ಇಂಡಿಯಾ -ಚೀನಾ ಮತ್ತು 1965ರಲ್ಲಿ ನಡೆದಿದ್ದ ಇಂಡಿಯಾ - ಪಾಕಿಸ್ತಾನ ಯುದ್ಧಗಳಿಂದ ಕೇಂದ್ರ ಸರ್ಕಾರವು ತೀವ್ರವಾದ ಹಣಕಾಸಿನ ಸಂಕಷ್ಟಕ್ಕೆ ಸಿಲುಕಿತ್ತು. ಆದುದರಿಂದಲೇ ಕೇಂದ್ರ ಸರ್ಕಾರದ ಅಧೀನದಲ್ಲಿದ್ದ ಬೃಹತ್ ಹಣಕಾಸಿನ ಸಂಸ್ಥೆಗಳಾದ ಐ.ಡಿ.ಬಿ.ಐ.ಮತ್ತು ಐ.ಎಫ್.ಸಿ.ಗಳು ದೇಶದಲ್ಲಿನ ಯಾವುದೇ ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಹಣಕಾಸಿನ ನೆರವನ್ನು ನೀಡುವ ಸ್ಥಿತಿಯಲ್ಲಿರಲಿಲ್ಲ. ಅಂದು ಮಂಡ್ಯ ಜಿಲ್ಲೆಯ ರೈತರಿಗೆ ಎರಡು ಕೋಟಿ ರೂ.ಗಳಷ್ಟು ಬಂಡವಾಳವನ್ನು ಸಂಗ್ರಹಿಸಲು ಅಗತ್ಯವಾದ ಷೇರುಗಳನ್ನು ಕೊಂಡುಕೊಳ್ಳುವಷ್ಟು ಉತ್ತಮವಾದ ಆರ್ಥಿಕ ಶಕ್ತಿ ಇರಲಿಲ್ಲ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಈಗ ಒದಗಿ ಬಂದಿರುವ ಅವಕಾಶವನ್ನು ನಿರಾಕರಿಸಿದರೆ, ಇನ್ನೆಂದಿಗೂ ಕಾಳಮುದ್ದನ ದೊಡ್ಡಿಯಲ್ಲಿ ಬೃಹತ್ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಸಾಧ್ಯವಾಗುವುದಿಲ್ಲವೆಂಬ ಕಟು ಸತ್ಯವನ್ನು ಅರಿತುಕೊಂಡ ಪ್ರವರ್ತಕರೆಲ್ಲರೂ ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಗೆ ಕರ್ನಾಟಕದ ಕಾಳಮುದ್ದನ ದೊಡ್ಡಿಯಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಒಪ್ಪಿಗೆಯನ್ನು ನೀಡುವ ಮುನ್ನ ಹಲವು ಕರಾರುಗಳನ್ನು ವಿಧಿಸಿದರು.

★ ಕಾಳಮುದ್ದನ ದೊಡ್ಡಿಯ ಸಕ್ಕರೆ ಕಾರ್ಖಾನೆಯಲ್ಲಿ ಸ್ಥಳೀಯರಿಗೆ ಮತ್ತು ಕನ್ನಡಿಗರಿಗೆ ಅತ್ಯಧಿಕ ಸಂಖ್ಯೆಯಲ್ಲಿ ಉದ್ಯೋಗಗಳನ್ನು ನೀಡಬೇಕು.

★ ಕಬ್ಬು ಬೆಳೆಗಾರರಿಗೆ ಆಯಾಯ ವರ್ಷಗಳಲ್ಲಿ ಪರಿಷ್ಕರಿಸಿದ ಉತ್ತೇಜನಾ ಪೂರ್ಣವಾದ ಉತ್ತಮ ಬೆಲೆಯನ್ನು ನೀಡಬೇಕು.

★ ಕಾಳಮುದ್ದನ ದೊಡ್ಡಿಯ ಸುತ್ತಮುತ್ತಣ ನೂರಾರು ಹಳ್ಳಿಗಳ ಲಕ್ಷಾಂತರ ಮಂದಿ ರೈತರ ಮತ್ತು ಕೃಷಿ ಕಾರ್ಮಿಕರ ಆರ್ಥಿಕ ಪ್ರಗತಿಯೊಡನೆ, ಈ ಭಾಗದ ಜನ ಸಮುದಾಯದ ಶೈಕ್ಷಣಿಕ ಮತ್ತು ಸಾಮಾಜಿಕ ಪ್ರಗತಿಯ ಜವಾಬ್ದಾರಿಯನ್ನು ಸಕ್ಕರೆ ಕಾರ್ಖಾನೆಯ ಆಡಳಿತ ಮಂಡಲಿಯು ವಹಿಸಿಕೊಳ್ಳಬೇಕು.

ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಎನ್.ಮಹಾಲಿಂಗಮ್ ಮತ್ತು ಎನ್.ಚಂದಪ್ಪನವರು ಈ ಎಲ್ಲಾ ಕರಾರುಗಳಿಗೂ ಬದ್ಧರಾಗಿ, ಈ ಭಾಗದ ಹಳ್ಳಿಗಾಡಿನ ಸರ್ವತೋಮುಖ ಪ್ರಗತಿಗೆ ನೆರವಾಗುವುದಾಗಿ ಆಶ್ವಾಸನೆಯನ್ನು ನೀಡಿದರು. ಅನಂತರ ಪ್ರವರ್ತಕರೆಲ್ಲರೂ ಸರ್ವಾನುಮತದಿಂದ ಸಮ್ಮತಿಸಿದರು.

ತಮಿಳುನಾಡಿನ ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ 'ಬಿ' ಘಟಕವಾಗಿ ಸಕ್ಕರೆ ಕಾರ್ಖಾನೆಯನ್ನು ಕಾಳಮುದ್ದನದೊಡ್ಡಿಯಲ್ಲಿ ಸ್ಥಾಪಿಸಲು ಅನುವಾಗುವಂತೆ, ಭಾರತೀ ಸಹಕಾರ ಸಕ್ಕರೆ

ಕಾರ್ಖಾನೆಯ ಹೆಸರಿನಲ್ಲಿ ನೀಡಬೇಕಾಗಿದ್ದ ಕೈಗಾರಿಕಾ ಲೈಸೆನ್ಸ್ ಅನ್ನು ಶ್ರೀ ಶಕ್ತಿ ಷುಗರ್ಸ್ ಸಂಸ್ಥೆಯ ಹೆಸರಿನಲ್ಲಿ ನೀಡುವಂತೆ ಕರ್ನಾಟಕ ರಾಜ್ಯ ಸರ್ಕಾರದ ಮೂಲಕ ಕೇಂದ್ರ ಸರ್ಕಾರವನ್ನು ಕೋರಿಕೊಳ್ಳಲಾಯಿತು. ಈ ಕೋರಿಕೆಯನ್ನು ಕೂಡಲೇ ಸ್ವೀಕರಿಸಿದ ಕೇಂದ್ರ ಸರ್ಕಾರವು 1969 ರ ನವೆಂಬರ್ ತಿಂಗಳಿನಲ್ಲಿ ಕೈಗಾರಿಕಾ ಲೈಸೆನ್ಸ್ ಅನ್ನು ನೀಡಿತು.

ಮಂಡ್ಯ ಜಿಲ್ಲೆಯ ಸ್ಥಳೀಯ ಕಬ್ಬು ಬೆಳೆಗಾರರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು 1970ರ ಡಿಸೆಂಬರ್ 14ನೆಯ ದಿನಾಂಕದಂದು ಕಾಳಮುದ್ದನ ದೊಡ್ಡಿಯಲ್ಲಿ ಸ್ಥಾಪನೆಗೊಳ್ಳುತ್ತಿರುವ ಸಕ್ಕರೆ ಕಾರ್ಖಾನೆಯನ್ನು ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆ ಎಂಬ ಹೆಸರಿನಲ್ಲಿ ಒಂದು ಸ್ವತಂತ್ರ ಕಂಪನಿಯನ್ನಾಗಿ 1956ರ ಕಂಪನಿಗಳ ನಿಯಮಾನುಸಾರ ನೋಂದಾಯಿಸಲಾಯಿತು.

ಈಕ್ವಿಟಿ ಬೇಸ್ 125 ಲಕ್ಷ ರೂ.ಗಳು, ಆದ್ಯತೆಯ ಷೇರು ಧನ 25 ಲಕ್ಷ ರೂ.ಗಳು ಮತ್ತು ಕಾಲಾವಧಿ ಸಾಲ 200 ಲಕ್ಷ ರೂ.ಗಳ ಬಂಡವಾಳ ಹೂಡಿಕೆಯೊಂದಿಗೆ ಕಾಳಮುದ್ದನ ದೊಡ್ಡಿಯಲ್ಲಿ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯು ಒಂದು ಸ್ವತಂತ್ರ ಕಂಪನಿಯಾಗಿ ರೂಪುಗೊಂಡಿತು.

ವರ್ಗಾವಣೆಯ ಸಂದರ್ಭದಲ್ಲಿ ' ಭಾರತೀ ಸಹಕಾರ ಸಕ್ಕರೆ ಕಾರ್ಖಾನೆ ' ಯನ್ನು ಲಿಕ್ವಿಡೇಟ್ ಮಾಡಿ, ಈ ಸಹಕಾರ ಸಂಘವು ಷೇರುಗಳ ಮಾರಾಟದಿಂದ ಸಂಗ್ರಹಿಸಿದ್ದ ಒಂದೂವರೆ ಲಕ್ಷ ರೂಪಾಯಿಗಳನ್ನು ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗೆ ಆಯಾಯ ಷೇರುದಾರರ ಹೆಸರಿನಲ್ಲಿಯೇ ವರ್ಗಾಯಿಸಲಾಯಿತು.

1969ನೆಯ ನವೆಂಬರ್ ತಿಂಗಳಿನಲ್ಲಿ ಕಾಳಮುದ್ದನ ದೊಡ್ಡಿಯಲ್ಲಿ ಪ್ರಾರಂಭಗೊಂಡ ಕಾರ್ಖಾನೆ ನಿರ್ಮಾಣದ ಕಾಮಗಾರಿಯು 1974ರಲ್ಲಿ ಪೂರ್ಣಗೊಂಡು, ಪ್ರತಿ ದಿನ ಒಂದು ಸಾವಿರದ ಇನ್ನೂರೈವತ್ತು ಟನ್ ಕಬ್ಬನ್ನು ಅರೆಯುವುದರ ಮುಲಕ ಸಕ್ಕರೆ ಉತ್ಪಾದನೆಯನ್ನು ಪ್ರಾರಂಭಿಸಿತು. ಅಂದಿನಿಂದ ಮಂಡ್ಯ ಜಿಲ್ಲೆಯ ರೈತ ಸಮುದಾಯದ ಮತ್ತು ಕೃಷಿ ಕಾರ್ಮಿಕರ ಆರ್ಥಿಕ ಅಭಿವೃದ್ಧಿಯಲ್ಲಿ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯು ಮಹತ್ತರವಾದ ಪಾತ್ರವನ್ನು ನಿರ್ವಹಿಸುತ್ತ ಬಂದಿದೆ.

ಜಿ.ಮಾದೇಗೌಡರು ಶಾಸಕರಾಗಿದ್ದ 1962 ರಿಂದ 1989ರ ಅವಧಿಯಲ್ಲಿ ಕಿರುಗಾವಲು ಕ್ಷೇತ್ರದ ಉದ್ದಗಲದಲ್ಲಿ ಕರ್ನಾಟಕ ರಾಜ್ಯ ಸರ್ಕಾರದಿಂದ ರೂಪುಗೊಂಡ ಅನೇಕ ಜನಪರ ಯೋಜನೆಗಳು ರಚನಾತ್ಮಕವಾಗಿ ಕಾರ್ಯರೂಪಕ್ಕೆ ಬಂದು, ವ್ಯವಸಾಯ, ಆರೋಗ್ಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಇಲ್ಲಿನ ಜನಸಮುದಾಯ ಸರ್ವತೋಮುಖ ಅಭಿವೃದ್ಧಿಯತ್ತ ಸಾಗುತ್ತಿದೆ. ಇಷ್ಟೆಲ್ಲಾ ಸಾಧನೆಗಳು ಜಿ.ಮಾದೇಗೌಡರಿಗೆ ಸಾಕಷ್ಟು ತೃಪ್ತಿಯನ್ನು ತಂದುಕೊಟ್ಟಿದ್ದರೂ ಅವರ ಒಂದು ಕನಸು, ಇನ್ನೂ ನನಸಾಗದೆ ಉಳಿದಿದೆ.

ಅದೇನೆಂದರೆ.........ಕಾಳಮುದ್ದನ ದೊಡ್ಡಿಯಲ್ಲಿ 1965ರಲ್ಲಿ ಭಾರತೀ ವಸತಿ ವಿದ್ಯಾರ್ಥಿ ನಿಲಯವನ್ನು ತೆರೆದು, ಭಾರತೀ ಪ್ರೌಢಶಾಲೆಗೆ ದೂರದ ಹಳ್ಳಿಗಳಿಂದ ಬರುತ್ತಿದ್ದ ವಿದ್ಯಾರ್ಥಿಗಳಿಗೆ ಉಚಿತವಾಗಿ ಊಟ ಮತ್ತು ವಸತಿ ಸೌಕರ್ಯವನ್ನು ಒದಗಿಸಿ, ಹಳ್ಳಿಗಾಡಿನ ಮಕ್ಕಳ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಲಾಗುತ್ತಿತ್ತು. ಕಾಳಮುದ್ದನ ದೊಡ್ಡಿಯ ಸುತ್ತಮುತ್ತಣ ಹಳ್ಳಿಗಳ ರೈತರಿಂದ ಪ್ರತಿ ವರ್ಷ ಸುಗ್ಗಿಯ ಕಾಲದಲ್ಲಿ ಸಂಗ್ರಹಿಸುತ್ತಿದ್ದ ಬತ್ತದಿಂದ ಈ ಕಾರ್ಯ ಸುಗಮವಾಗಿ ನೆರವೇರುತ್ತಿತ್ತು. ಆದರೆ ಬರುಬರುತ್ತಾ ವಿದ್ಯಾರ್ಥಿಗಳ ಸಂಖ್ಯೆ ಅಧಿಕಗೊಳ್ಳತೊಡಗಿದ್ದರಿಂದ 1970ರ ನಂತರ ಉಚಿತವಾಗಿ ನೀಡುತ್ತಿದ್ದ ಊಟ ಮತ್ತು ವಸತಿ ಸೌಕರ್ಯವನ್ನು ಮುಂದುವರಿಸಲಾಗಲಿಲ್ಲ. ಒಂದು ವೇಳೆ ಜಿ.ಮಾದೇಗೌಡರ ಯೋಜನೆಯಂತೆ ಭಾರತೀ ಸಹಕಾರ ಸಕ್ಕರೆ ಕಾರ್ಖಾನೆಯು ಸ್ಥಾಪನೆಗೊಂಡಿದ್ದರೆ, ಕಾರ್ಖಾನೆಯ ವತಿಯಿಂದ ಪ್ರತಿ ವರ್ಷವೂ ನಿರಂತರವಾಗಿ ಆರ್ಥಿಕ ನೆರವನ್ನು ಪಡೆಯುತ್ತಾ ಕಾಳಮುದ್ದನ ದೊಡ್ಡಿಯ ಭಾರತೀ ವಿದ್ಯಾ ಸಂಸ್ಥೆಯಲ್ಲಿ ಶಿಕ್ಷಣವನ್ನು ಪಡೆಯಲೆಂದು ಬರುವ ಹಳ್ಳಿಗಾಡಿನ ಪ್ರತಿಯೊಬ್ಬ ವಿದ್ಯಾರ್ಥಿಗೂ, ವಿದ್ಯಾ ಸಂಸ್ಥೆಯ ವತಿಯಿಂದಲೇ ಉಚಿತವಾಗಿ ಪುಸ್ತಕ, ಸಮವಸ್ತ್ರ, ಊಟ ಮತ್ತು ವಸತಿ ಸೌಕರ್ಯಗಳನ್ನು ಒದಗಿಸಬೇಕೆಂಬ ಮಹತ್ತರವಾದ ಆಸೆ ಗೌಡರ ಮನದಲ್ಲಿತ್ತು.

ಈಗಲಾದರೂ ಶ್ರೀ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಯ ಆಡಳಿತ ಮಂಡಲಿಯವರು ಇತ್ತ ಗಮನ ಹರಿಸಿ, ಪ್ರತಿ ವರ್ಷವೂ ನಿರಂತರವಾಗಿ ಆರ್ಥಿಕ ನೆರವನ್ನು ಭಾರತೀ ವಿದ್ಯಾಸಂಸ್ಥೆಗೆ ನೀಡುವುದರ ಮೂಲಕ, ಈ ಭಾಗದ ವಿದ್ಯಾರ್ಥಿಗಳ ಶೈಕ್ಷಣಿಕ ಬೆಳವಣಿಗೆಗೆ ಸಹಕಾರಿಯಾಗಬೇಕೆಂಬ ಹಂಬಲವನ್ನು ಜಿ.ಮಾದೇಗೌಡರು ಹೊಂದಿದ್ದಾರೆ.



## ಭಾಗ - 2

ಮಂಡ್ಯ ಜಿಲ್ಲೆಯ ಶ್ರೀಮಂತ ಮತ್ತು ಮಧ್ಯಮ ವರ್ಗದ ಜನರು, ತಮ್ಮ ಮಕ್ಕಳಿಗೆ ಪಿ.ಯು.ಸಿ., ಹಂತದವರೆಗೆ ಅತ್ಯುತ್ತಮವಾದ ಶಿಕ್ಷಣವನ್ನು ಕೊಡಿಸಬೇಕೆಂಬ ಉದ್ದೇಶದಿಂದ ಮೈಸೂರಿನ ಶ್ರೀ ರಾಮಕೃಷ್ಣಾಶ್ರಮ, ದಕ್ಷಿಣ ಕನ್ನಡ ಜಿಲ್ಲೆಯ ಆಳಿಕೆ, ಬೆಂಗಳೂರು ಜಿಲ್ಲೆಯ ಚೆನ್ನೇನಹಳ್ಳಿ ವಸತಿ ವಿದ್ಯಾ ಶಾಲೆಗಳಿಗೆ ಎಡತಾಕುತ್ತಾ, ಅಲ್ಲಿ ಪ್ರವೇಶ ದೊರೆಯದಿದ್ದಾಗ, ಬಹಳ ನಿರಾಶೆಯಿಂದ ಅಲೆಯುತ್ತಿದ್ದುದನ್ನು ಗಮನಿಸಿದ್ದ ಜಿ.ಮಾದೇಗೌಡರಿಗೆ , ಅಂತಹ ಒಂದು ವಸತಿ ವಿದ್ಯಾಶಾಲೆಯನ್ನು ಮಂಡ್ಯ ಜಿಲ್ಲೆಯಲ್ಲಿ ಸ್ಥಾಪಿಸಿ, ಉತ್ತಮವಾಗಿ ನಡೆಸಿಕೊಂಡು ಬರಬೇಕೆಂಬ ಆಸೆಯು ಹಲವಾರು ವರ್ಷಗಳಿಂದಿತ್ತು. ಇದಕ್ಕಾಗಿ ಕಾಳಮುದ್ದನ ದೊಡ್ಡಿಯಿಂದ ನಾಲ್ಕು ಕಿಲೋ ಮೀಟರ್ ದೂರದಲ್ಲಿರುವ ಹನುಮಂತನಗರದ ಬಳಿಯ ತಿಟ್ಟಿನ ಪ್ರದೇಶವೊಂದನ್ನು ಆಯ್ಕೆ ಮಾಡಿಕೊಂಡರು. ಈ ಭೂಮಿಯು ಕಲ್ಲು ಬೊರ್ಜೆಯಿಂದ ತುಂಬಿ ಹಳ್ಳ ಕೊಳ್ಳಗಳಿಂದ ಕೂಡಿತ್ತು. ಹಗಲು - ರಾತ್ರಿ ಎನ್ನದೇ ಭೂಮಿಯನ್ನು ಸಮತಟ್ಟುಗೊಳಿಸಿ 1988ರಲ್ಲಿ ಪ್ರೌಢಶಾಲೆಯ ಎಂಟನೆಯ ತರಗತಿಯನ್ನು ತೆರೆಯುವುದರ ಮೂಲಕ ಭಾರತೀ ವಸತಿ ವಿದ್ಯಾಶಾಲೆಯನ್ನು ಇಲ್ಲಿ ಪ್ರಾರಂಭಿಸಿದರು.

ಕಳೆದ ಹನ್ನೆರಡು ವರ್ಷಗಳಲ್ಲಿ ಹನುಮಂತನಗರದ ಭಾರತೀ ವಸತಿ ಪ್ರೌಢಶಾಲೆಯು ಹಂತ ಹಂತವಾಗಿ ಶೈಕ್ಷಣಿಕ ಪ್ರಗತಿಯನ್ನು ಸಾಧಿಸುತ್ತಾ, ಇದೀಗ ಭಾರತೀ ವಸತಿ ಸಂಯುಕ್ತ ಪದವಿ ಪೂರ್ವ ಕಾಲೇಜಾಗಿ ರೂಪುಗೊಂಡಿದೆ. ಒಟ್ಟು ಇನ್ನೂರೈವತ್ತು ವಿದ್ಯಾರ್ಥಿಗಳು ಇಲ್ಲಿ ವಸತಿ ವಿದ್ಯಾ ಮಂದಿರದಲ್ಲಿ ಉತ್ತಮವಾದ ರೀತಿಯಲ್ಲಿ ವಿದ್ಯೆಯನ್ನು ಪಡೆಯುತ್ತಿದ್ದಾರೆ.

ಭಾರತೀ ವಸತಿ ಪ್ರೌಢಶಾಲೆಯು ಪ್ರಾರಂಭಗೊಂಡ ಮೊದ ಮೊದಲಿನ ದಿನಗಳಲ್ಲಿ, ಶಾಲೆಯ ಶೈಕ್ಷಣಿಕ ಅಗತ್ಯಗಳನ್ನು ಪೂರೈಸುವ ಜವಾಬ್ದಾರಿಯನ್ನು ಜಿ.ಮಾದೇಗೌಡರು ನನಗೆ ವಹಿಸಿದ್ದರು. ಈ ಸಂದರ್ಭದಲ್ಲಿ ಅವರ ನಡೆ - ನುಡಿಗಳನ್ನು ತುಂಬಾ ಹತ್ತಿರದಿಂದ ನೋಡುವ ಅವಕಾಶ ನನಗೆ ಲಭಿಸಿತು. ಆಗ ನಡೆದ ಒಂದು ಘಟನೆಯನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

## ಅಷ್ಟೊಂದು ಆಗುತ್ತೇನ್ರಿ !

ಹನುಮಂತನಗರದಲ್ಲಿ ಶಾಲಾ ಕಟ್ಟಡ ನಿರ್ಮಾಣದ ಕೆಲಸ ಮುಗಿದ ನಂತರ, ಎಂಟನೆಯ ತರಗತಿಗೆ ಸೇರಲಿರುವ ವಿದ್ಯಾರ್ಥಿಗಳಿಂದ ಅರ್ಜಿಗಳನ್ನು ಕರೆದು, ಅವರಲ್ಲಿ ಉತ್ತಮ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ಸೂಕ್ತವಾದ ಪರೀಕ್ಷೆಯೊಂದನ್ನು ನಡೆಸಲು ದಿನಾಂಕ ಮತ್ತು ವೇಳೆಯನ್ನು ಮಾದೇಗೌಡರು ಗೊತ್ತುಪಡಿಸಿದರು. ಅನಂತರ ನನ್ನನ್ನು ಕರೆದು-

"ನೋಡಿ ನಾಗರಾಜ್, ಪ್ರವೇಶ ಪರೀಕ್ಷೆಗೆ ಸಂಬಂಧಪಟ್ಟ ವಿಷಯವನ್ನು ಆದಷ್ಟು ಸಂಕ್ಷಿಪ್ತವಾಗಿ ಬರೆದು, ಪ್ರಜಾವಾಣಿ ಪತ್ರಿಕೆಯಲ್ಲಿ ಹಾಕಿಸಿ, ಇದಕ್ಕೆ ಏನೊಂದು ನೂರೋ.... ನೂರೈವತ್ತು ರೂಪಾಯಿ ತೆಗೆದುಕೊಳ್ಳಬಹುದು" ಎಂದರು.

ಕೂಡಲೇ ನಾನು ಕಾಳಮುದ್ದನ ದೊಡ್ಡಿಯಲ್ಲಿದ್ದ ಪ್ರಜಾವಾಣಿ ಪತ್ರಿಕೆಯ ಪ್ರತಿನಿಧಿ ಅಣ್ಣೂರು ಲಕ್ಷ್ಮಣ ಅವರನ್ನು ಸಂಪರ್ಕಿಸಿದೆ. ಆಗ ಲಕ್ಷ್ಮಣ ಅವರು ಹೇಳಿದ ಮೊತ್ತಕ್ಕೂ.... ಮಾದೇಗೌಡರು ಹೇಳಿದ್ದ ಮೊತ್ತಕ್ಕೂ ಬಹಳ ಅಂತರವಿತ್ತು. "ಹೇಗಾದರೂ ಆಗಲಿ..... ಮಾದೇಗೌಡರಿಗೆ ಒಂದು ಸಾರಿ.....ಇಷ್ಟು ದುಡ್ಡು ಖರ್ಚಾಗುತ್ತೆ ಸಾರ್ ಅಂತ ತಿಳಿಸಿ, ಅವರ ಗಮನಕ್ಕೆ ತಂದು, ಅನಂತರ ಜಾಹಿರಾತನ್ನು ಕೊಡೋಣವೆಂದು" ನಿರ್ಧರಿಸಿಕೊಂಡು.....ಬಿಡುವಾಗಿದ್ದರೆ ಭಾರತೀ ವಿದ್ಯಾ ಸಂಸ್ಥೆಯ ಕಛೇರಿಯ ಬಳಿಗೆ ಒಂದು ಗಳಿಗೆ ಬಂದು ಹೋಗುವಂತೆ ಅಣ್ಣೂರು ಲಕ್ಷ್ಮಣ ಅವರಿಗೆ ಹೇಳಿ, ಮತ್ತೆ ಮಾದೇಗೌಡರ ಬಳಿಗೆ ಬಂದು -

"ನೀವು ಹೇಳಿದ ಹಾಗೆ ನೂರೈವತ್ತಕ್ಕೆ ಆಗಲ್ವಂತೆ ಸಾರ್.....ಇಷ್ಟು ಮ್ಯಾಟರ್ ಅನ್ನು ಪ್ರಜಾವಾಣಿಯಲ್ಲಿ ಜಾಹಿರಾತನ್ನಾಗಿ ಪ್ರಕಟಿಸಬೇಕಾದರೆ ಆರು ನೂರು ರೂಪಾಯಿ ಛಾರ್ಜು ಮಾಡ್ತಾರಂತೆ ಸಾರ್" ಎಂದೆ. ತಕ್ಷಣವೇ ಒಂದು ರೀತಿ ಗಾಬರಿಗೊಂಡಂತಾದ ಮಾದೇಗೌಡರು....ತುಂಬಾ ಆಚ್ಚರಿಯಿಂದ "ಅಷ್ಟೊಂದು ಆಗುತ್ತೇನ್ರಿ!" ಎಂದು ಕೇಳಿ, ಒಂದೆರಡು ಕ್ಷಣಗಳ ಕಾಲ ಮೌನವಾದರು. ನಾನು ಅವರ ಮುಖಭಾವವನ್ನು ಆಗ ಸೂಕ್ಷ್ಮವಾಗಿ ಅವಲೋಕಿಸುತ್ತಿದ್ದೆ. "ಕೇವಲ ಜಾಹಿರಾತಿಗೆ ಇಷ್ಟೊಂದು ದುಡ್ಡನ್ನು ಖರ್ಚು ಮಾಡಬೇಕಲ್ಲ" ಎಂಬ ಆತಂಕ ಅವರಲ್ಲಿ ಮೂಡಿತ್ತು. ಅಷ್ಟರಲ್ಲಿ ಅಲ್ಲಿಗೆ ಅಣ್ಣೂರು ಲಕ್ಷ್ಮಣ ಬಂದರು.

" ಏನಪ್ಪ ಲಕ್ಷ್ಮಣ........ ಒಂದು ಇಷ್ಟುದ್ದದ ವಿಷಯವನ್ನು ಪೇಪರ್‌ನಲ್ಲಿ ಹಾಕಿಸುವುದಕ್ಕೆ ಆರು ನೂರು ಕೇಳ್ತೀಯಂತೆ " ಎಂದು ಪ್ರಶ್ನಿಸಿದರು.

"ಹೌದು ಸಾರ್, ಜಾಹಿರಾತಿಗೆ ಸೆಂಟಿ ಮೀಟರ್ ಮೇಲೆ ಲೆಕ್ಕ ಸಾರ್. ಇಷ್ಟು ಸೆಂಟಿ ಮೀಟರ್ಗೆ.....ಇಷ್ಟು ದುಡ್ಡು ಅಂತ......ಪೇಪರ್‌ನವರೇ ಫಿಕ್ಸ್ ಮಾಡ್ಬುಟ್ಟವ್ರೆ ಸಾರ್."

"ಅದೇನಪ್ಪ ಅಷ್ಟೊಂದು ಜಾಸ್ತಿ. ಇದು ವಿದ್ಯಾ ಸಂಸ್ಥೆದಲ್ಲವೇ..... ಒಸಿ ಕಮ್ಮಿ ಮಾಡಿಸ್ರಿ."

"ಆಗೋದಿಲ್ಲ ಸಾರ್..... ಎಲ್ಲಾ ಜಾಹಿರಾತುಗಳಿಗೂ ಒಂದೇ ಛಾರ್ಜು ಸಾರ್ ಅದೂ ಅಲ್ಲದೆ

ಜಾಹಿರಾತನ್ನು ಕಳುಹಿಸಿಕೊಡುವಾಗಲೇ, ಅದರ ಜೊತೆಯಲ್ಲೇ ಅದಕ್ಕಾಗುವಷ್ಟು ದುಡ್ಡನ್ನು ಕಳುಹಿಸಬೇಕು......ಇಲ್ದೇದ್ರೆ ಪ್ರಜಾವಾಣಿಯಲ್ಲಿ ಪ್ರಕಟಿಸುವುದಿಲ್ಲ ಸಾರ್" ಎಂದು ಜಾಹಿರಾತಿಗೆ ಸಂಬಂಧಪಟ್ಟ ವಿಷಯಗಳನ್ನು ಅಣ್ಣೂರು ಲಕ್ಷ್ಮಣ ವಿವರಿಸಿದರು.

"ಹೋಗ್ಲಿ.....ನಿನ್ನ ಕಮೀಷನನ್ನಾದ್ರು ಬುಟ್ಬುಡು" ಎಂದು ಗೌಡರು ಚೌಕಾಶಿ ಮಾಡತೊಡಗಿದರು.

"ಅದನ್ನ ಬುಟ್ಟೆ ಸಾರ್ ನಾನು ಹೇಳಿರೂದು.....ಭಾರತೀ ವಿದ್ಯಾ ಸಂಸ್ಥೆ ವಿಷಯಕ್ಕೆ ನಾನು ಯಾವತ್ತೂ ಹೆಚ್ಚಿಗೆ ಹೇಳೂದಿಲ್ಲ ಸಾರ್" ಎಂದರು. ಈಗ ಸ್ವಲ್ಪ ಸಮಾಧಾನಗೊಂಡಂತೆ ಕಂಡುಬಂದ ಗೌಡರು ನನ್ನತ್ತ ತಿರುಗಿ -

" ಇನ್ನೇನ್ರಿ ಮಾಡೂದು..... ವಿಷಯ ನಾಲ್ಕು ಜನಕ್ಕೆ ತಿಳಿದು, ಅರ್ಜಿಗಳು ಬರಬೇಕಾದ್ರೆ ಪೇಪರ್‌ನಲ್ಲಿ ಹಾಕಿಸಲೇಬೇಕು. ಪ್ರಚಾರ ಇಲ್ದೇ ಇದ್ರೆ, ಹೆಚ್ಚಿಗೆ ಜನಕ್ಕೆ, ಇಲ್ಲಿ ವಸತಿ ಶಾಲೆಯನ್ನು ಪ್ರಾರಂಭಿಸುತ್ತಿರುವುದು ಗೊತ್ತಾಗುವುದಿಲ್ಲ.......ಇವೆಲ್ಲಾ ಮಾಡ್ಲೇಬೇಕಾದ ಖರ್ಚು.....ಕೊಟ್ಬುಡಿ" ಎಂದು ಹೇಳಿ, ಮತ್ತೆ ಅಣ್ಣೂರು ಲಕ್ಷ್ಮಣ ಅವರನ್ನು ಉದ್ದೇಶಿಸಿ -

" ಪೇಪರ್‌ನಲ್ಲಿ ಒಳ್ಳೇ ಕಡೆ ಎದ್ದು ಕಾಣುವಂಗೆ ಹಾಕಿಸಪ್ಪ" ಎಂದು ಕಳಕಳಿಯಿಂದ ಕೇಳಿಕೊಂಡರು.

ಅಂದು ಮಾದೇಗೌಡರು ವಿದ್ಯಾ ಸಂಸ್ಥೆಯ ಆರು ನೂರು ರೂಪಾಯಿಗಳನ್ನು ಖರ್ಚು ಮಾಡುವ ಮುನ್ನ.....ಅವರು ಪಟ್ಟ ಆತಂಕ ಮತ್ತು ವಹಿಸಿದ ಎಚ್ಚರ.....ಇಂದಿಗೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ವರ್ಷವೊಂದಕ್ಕೆ ಲಕ್ಷಾಂತರ ರೂ.ಗಳ ವ್ಯವಹಾರ ನಡೆಸುವ ವಿದ್ಯಾ ಸಂಸ್ಥೆಯೊಂದರ ಅಧ್ಯಕ್ಷರಾದ ಮಾದೇಗೌಡರು ಸಂಸ್ಥೆಯ ಹಣವನ್ನು ವೆಚ್ಚ ಮಾಡುವಾಗ ಮೈಯೆಲ್ಲಾ ಕಣ್ಣಾಗಿ ಕಾಯುತ್ತಾರೆ.

ಯಾವುದೇ ಕಾರಣದಿಂದಾಗಲಿ ವಿದ್ಯಾ ಸಂಸ್ಥೆಯ ಹಣವು ಅಪವ್ಯಯಗೊಳ್ಳಲು ಅಥವಾ ದುಂದು ವೆಚ್ಚವಾಗಲು ಅವಕಾಶವಾಗದಂತೆ ಎಲ್ಲವನ್ನೂ ಅತಿ ಸೂಕ್ಷ್ಮವಾಗಿ ಗಮನಿಸುತ್ತಿರುತ್ತಾರೆ. ಎಲ್ಲಿಯಾದರೂ.....ಏನಾದರೂ ಲೋಪ-ದೋಷಗಳು ಕಂಡುಬಂದರೆ, ಕೆರಳಿ ಕೆಂಡಮಂಡಲವಾಗುತ್ತಾರೆ.

ವಿದ್ಯಾ ಸಂಸ್ಥೆಗೆ ಸಂಬಂಧಪಟ್ಟಂತೆ ಪ್ರಾರಂಭಿಸುವ ಕಾರ್ಯಗಳು.......ಕಟ್ಟಡದ ನಿರ್ಮಾಣವಾಗಲಿ ಅಥವಾ ಶೈಕ್ಷಣಿಕ ಪ್ರಗತಿಗೆ ಕಾರಣವಾಗುವ ಯೋಜನೆಯಾಗಲಿ....ಅವು ಸಂಪೂರ್ಣಗೊಳ್ಳುವ ತನಕ, ಅವಕ್ಕೆ ಸಂಬಂಧಪಟ್ಟ ವಿಷಯಗಳನ್ನೇ ತಲೆಯಲ್ಲಿ ತುಂಬಿಕೊಂಡು, ಎಲ್ಲಾ ಹಂತಗಳಲ್ಲೂ ನಿರಂತರವಾಗಿ ಮೇಲ್ವಿಚಾರಣೆಯನ್ನು ವಹಿಸಿಕೊಂಡು, ನಿರ್ದಿಷ್ಟ ಅವಧಿಯಲ್ಲಿ ಅವು ಈಡೇರುವಂತೆ ನೋಡಿಕೊಳ್ಳುತ್ತಾರೆ. ಇದ ಹಿಂದಲೇ ಕಾಳಮುದ್ದನ ದೊಡ್ಡಿ ಮತ್ತು ಹನುಮಂತನಗರಗಳಲ್ಲಿ ಶಾಲಾ ಕಾಲೇಜುಗಳ

ಭವ್ಯ ಕಟ್ಟಡಗಳು, ವಿದ್ಯಾರ್ಥಿ ನಿಲಯಗಳು, ಸುಸಜ್ಜಿತವಾದ ಪ್ರಯೋಗಾಲಯಗಳು, ಗ್ರಂಥ ಭಂಡಾರಗಳು, ಉದ್ಯೋಗಸ್ಥ ಮಹಿಳೆಯರ ಹಾಸ್ಟೆಲ್, ಜಿ.ಮಾದೇಗೌಡರ ರಾಜಕೀಯ ಮತ್ತು ಸಾಮಾಜಿಕ ಕಾರ್ಯಸಾಧನೆಗಳಲ್ಲಿ ಸಹವರ್ತಿಗಳು ಹಾಗೂ ಭಾರತೀ ವಿದ್ಯಾಸಂಸ್ಥೆಯ ಸಂಸ್ಥಾಪಕ ಕಾರ್ಯದರ್ಶಿಗಳಾಗಿದ್ದ ದಿವಂಗತ ಅಣ್ಣೂರು ಶ್ರೀ ಸಿದ್ದೇಗೌಡ ಸ್ಮಾರಕ ಕ್ರೀಡಾಂಗಣಗಳು ತ್ವರಿತಗತಿಯಲ್ಲಿ ನಿರ್ಮಾಣಗೊಂಡು, ಹಳ್ಳಿಗಾಡಿನ ಯುವಕ ಯುವತಿಯರ ದೈಹಿಕ, ಮಾನಸಿಕ ಮತ್ತು ಶೈಕ್ಷಣಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿವೆ.

1962ರಲ್ಲಿ ಸ್ಥಾಪನೆಗೊಂಡ ಭಾರತೀ ವಿದ್ಯಾ ಸಂಸ್ಥೆಯಲ್ಲಿ ಇದುವರೆಗೆ ಕೋಟಿಗಟ್ಟಲೆ ರೂಪಾಯಿಗಳ ಹಣಕಾಸಿನ ವ್ಯವಹಾರ ನಡೆದಿದೆ. ಇಷ್ಟು ದೊಡ್ಡ ಮೊತ್ತದ ವಹಿವಾಟಿನಲ್ಲಿ... ಎಂದೂ ತನ್ನ ಸ್ವಾರ್ಥಕ್ಕಾಗಿ ವಿದ್ಯಾ ಸಂಸ್ಥೆಯ ಹಣವನ್ನು ಬಳಸಿಕೊಳ್ಳದ.....ಶುದ್ಧ ಹಸ್ತದ ವ್ಯಕ್ತಿತ್ವವು ಜಿ.ಮಾದೇಗೌಡರಲ್ಲಿ ಇರುವುದರಿಂದಲೇ ......ಭಾರತೀ ವಿದ್ಯಾ ಸಂಸ್ಥೆಯು ನಿರಂತರವಾಗಿ ಬೆಳೆಯುತ್ತಾ.......ಹಳ್ಳಿಗಾಡಿನ ಸಾವಿರಾರು ಮಕ್ಕಳಿಗೆ ಜ್ಞಾನದ ಬೆಳಕನ್ನು ನೀಡುವ ತಾಣವಾಗಿದೆ.



ನಿರಂತರವಾದ ರಾಜಕೀಯ ಮತ್ತು ಸಾಮಾಜಿಕ ಚಟುವಟಿಕೆಗಳ ನಡುವೆಯೂ ಮಾದೇಗೌಡರು ಸದಾಕಾಲ ತಾವು ಕಟ್ಟಿ ಬೆಳೆಸುತ್ತಿರುವ ಸಂಘ ಸಂಸ್ಥೆಗಳ ಸರ್ವತೋಮುಖ ಪ್ರಗತಿಯ ಬಗ್ಗೆ, ನಾನಾ ವಿಧವಾದ ಯೋಜನೆಗಳನ್ನು ರೂಪಿಸಿಕೊಂಡು, ಅವನ್ನು ಕಾರ್ಯರೂಪಕ್ಕೆ ತರಲು ಶ್ರಮಿಸುತ್ತಿರುತ್ತಾರೆ.

ಸುಮಾರು ಮೂವತ್ತು ವರ್ಷಗಳ ಹಿಂದೆ ಭಾರತೀ ಕಾಲೇಜನ್ನು ಹಳ್ಳಿಗಾಡಿನ ಪರಿಸರದಲ್ಲಿ ಪ್ರಾರಂಭಿಸಿದ ಹೊಸದರಲ್ಲಿ, ಕಾಲೇಜು ಅಧ್ಯಾಪಕರ ಸಭೆಯೊಂದರಲ್ಲಿ -

"ನೀವು ನಮ್ಮ ಹಳ್ಳಿಯ ಮಕ್ಕಳಿಗೆ .....ಅವರು ಪ್ರತಿ ನಿತ್ಯ ಹೇಗೆ ಮಡಿ ಬಟ್ಟೆ ಉಟ್ಕೊಂಡು...ಎಣ್ಣೆ ಹಾಕಿ ತಲೆ ಬಾಚ್ಕೊಂಡು......ಚಪ್ಪಲಿ ಹಾಕೊಂಡು .......ಕಾಲೇಜಿಗೆ ನೀಟಾಗಿ ಬರ್ಬೇಕು ಅನ್ನೋದನ್ನ ಮೊದಲು ಒಂದೆರಡು ತರಗತಿಗಳಲ್ಲಿ ಪದೇ ಪದೇ ಹೇಳಿ, ಅವರಿಗೆ ಒಳ್ಳೆಯ ನಡೆನುಡಿಗಳ ತರಬೇತಿ ನೀಡಿ, ಆಮೇಲೆ ಪಾಠಗಳನ್ನು ಕಲಿಸಿ" ಎಂದು ಹೇಳುತ್ತಾ, ಹಳ್ಳಿಯ ಮಕ್ಕಳ ಭವಿಷ್ಯವನ್ನು ಉತ್ತಮವಾಗಿ ರೂಪಿಸುವುದರ ಬಗ್ಗೆ ತಮಗಿರುವ ಕಾಳಜಿಯನ್ನು ವ್ಯಕ್ತಪಡಿಸಿದ್ದ ಸಂದರ್ಭ ಇನ್ನೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಇವತ್ತಿಗೂ ನಮ್ಮ ಗ್ರಾಮೀಣ ಮಕ್ಕಳು ಪರೀಕ್ಷೆಗಳಲ್ಲಿ ಒಳ್ಳೆಯ ಫಲಿತಾಂಶವನ್ನು ಪಡೆದಾಗ.....ಪಠ್ಯೇತರ ಚಟುವಟಿಕೆಗಳಲ್ಲಿ ಮತ್ತು ಆಟೋಟಗಳಲ್ಲಿ ವಿಜೇತರಾದರೆಂಬ ಸುದ್ದಿಯನ್ನು ಕೇಳಿದಾಗ, ಮಾದೇಗೌಡರು ಪಡುವ ಸಂತೋಷಕ್ಕೆ ಪಾರವೇ ಇಲ್ಲ.

ವಿದ್ಯಾರ್ಥಿಗಳ ವ್ಯಕ್ತಿತ್ವದ ವಿಕಸನಕ್ಕೆ ಅಗತ್ಯವಾದುದೆಲ್ಲವನ್ನೂ ಕಲ್ಪಿಸಿಕೊಡಲು ಮಾದೇಗೌಡರ ಮನಸ್ಸು ಹೇಗೆ ಸದಾ ಕಾಲ ತುಡಿಯುತ್ತಿರುತ್ತದೆ ಮತ್ತು ಕ್ರಿಯಾಶೀಲವಾಗಿ ದುಡಿಯುತ್ತಿರುತ್ತದೆ ಎಂಬುದಕ್ಕೆ ಇತ್ತೀಚಿನ ಮೂರ್‍ನಾಕು ವರ್ಷಗಳ ಹಿಂದೆ ನಡೆದ ಒಂದು ಘಟನೆಯನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

# ನನಸಾದ ಕನಸು

"ಪ್ರಿನ್ಸಿಪಾಲರೇ ....ಪ್ರತಿನಿತ್ಯ ನಮ್ಮ ಕಾಲೇಜು ಎಷ್ಟು ಗಂಟೆಯಿಂದ ಎಷ್ಟು ಗಂಟೆಯವರೆಗೆ ನಡೆಯುತ್ತೆ ?"

"ಬೆಳಿಗ್ಗೆ ಒಂಬತ್ತೂವರೆ ಗಂಟೆಯಿಂದ.....ಸಂಜೆ ಐದೂವರೆ ಗಂಟೆಯ ತನಕ ನಡೆಯುತ್ತೆ ಸಾರ್."

"ಊಟ-ತಿಂಡಿಗೆ ವಿದ್ಯಾರ್ಥಿಗಳನ್ನು ಯಾವ ಟೈಮ್ನಲ್ಲಿ ಬಿಡ್ತೀರಿ ?"

"ಮಧ್ಯಾಹ್ನ ಒಂದೂವರೆಯಿಂದ ಎರಡೂವರೆ ಗಂಟೆಯವರೆಗೆ ವಿರಾಮ ಇರುತ್ತೆ ಸಾರ್. ಆದರೆ ಆಗ ಫೈನಲ್ ಬಿ.ಎಸ್‌ಸಿ., ವಿದ್ಯಾರ್ಥಿಗಳಿಗೆ ಪ್ರಾಕ್ಟಿಕಲ್ಸ್....ವೃತ್ತಿ ಶಿಕ್ಷಣದ ವಿಭಾಗದ ವಿದ್ಯಾರ್ಥಿಗಳಿಗೆ ಲಾಂಗ್ವೇಜ್ ಕ್ಲಾಸ್‌ಗಳು ನಡೀತಾಯಿರ್ತವೆ ಸಾರ್."

"ಮುಂದಿನ ವರ್ಷದಿಂದ ಹೀಗೆ ಮಾಡಬೇಡಿ.......ಕಾಲೇಜಿನ ವಿದ್ಯಾರ್ಥಿಗಳೆಲ್ಲರಿಗೂ ಒಂದೇ ವೇಳೆಯಲ್ಲಿ ಕಾಮನ್ ಇಂಟರ್‌ವಲ್ ಇರುವಂತೆ ವೇಳಾಪಟ್ಟಿಯನ್ನು ಸಿದ್ಧಪಡಿಸಿ....ಈ ರೀತಿ ಯಾಕೆ ಹೇಳ್ತ ಇದ್ದೀನಿ ಅಂದ್ರೆ, ಮಧ್ಯಾಹ್ನ ವಿರಾಮದ ವೇಳೆಯಲ್ಲಿ ನಮ್ಮ ವಿದ್ಯಾರ್ಥಿಗಳು ಒಳ್ಳೊಳ್ಳೆ ಭಕ್ತಿ ಗೀತೆಗಳನ್ನ......ಭಾವಗೀತೆಗಳನ್ನ ಕೇಳುವಂತಾಗಬೇಕು. ಪ್ರತಿನಿತ್ಯ ಸ್ವಲ್ಪ ಹೊತ್ತು ಇಂಪಾದ ಸಂಗೀತ ಕೇಳ್ತಾ....ಉತ್ತಮವಾದ ಸಾಹಿತ್ಯ ತಿಳಿಯುವುದರಿಂದ, ಅವರ ಮನಸ್ಸಿನ ಮೇಲೆ ಒಳ್ಳೆ ಪರಿಣಾಮವಾಗುತ್ತೆ" ಎಂದು ಜಿ.ಮಾದೇಗೌಡರು, ಇಂದಿಗೆ ಮೂರ್ನಾಕು ವರ್ಷಗಳ ಹಿಂದೆ.....ಭಾರತೀ ಕಾಲೇಜಿನ ಅಧ್ಯಾಪಕರ ಸಭೆಯೊಂದರಲ್ಲಿ ಪ್ರಿನ್ಸಿಪಾಲರಾದ ಪ್ರೊ.ಟಿ.ವಿ.ಹನುಮಪ್ಪನವರೊಡನೆ ಹೇಳಿದಾಗ, ಹಿಂದಿನ ಡೆಸ್ಕಿನಲ್ಲಿ ಕುಳಿತಿದ್ದ ನಾನು, ಪಕ್ಕದಲ್ಲಿದ್ದ ಸಹೋದ್ಯೋಗಿಯೊಡನೆ -

"ಅಯ್ಯೋ.....ನಮ್ಮ ಗೌಡರು ಇನ್ನೂ ಯಾವ ಕಾಲದಲ್ಲೋ ಇದ್ದಾರೆ. ಇವತ್ತಿನ ವಿದ್ಯಾರ್ಥಿಗಳು ಭಕ್ತಿ ಗೀತೆಗಳನ್ನ.....ಭಾವಗೀತೆಗಳನ್ನ ಪ್ರೀತಿಯಿಂದ ಕೇಳುವ ಸ್ಥಿತಿಯಲ್ಲಿ ಇದ್ದಾರೆಯೆ !" ಎಂದು ಪಿಸು ಮಾತಿನಲ್ಲಿ ನುಡಿದು ನಕ್ಕೆನು.

ಮಾದೇಗೌಡರ ಸಲಹೆಗೆ ಪ್ರಿನ್ಸಿಪಾಲರು ಪ್ರತಿಕ್ರಿಯಿಸುತ್ತಾ -

"ನೀವು ಹೇಳುವ ರೀತಿಯಲ್ಲಿ ಎಲ್ಲರಿಗೂ ಕಾಮನ್ ಇಂಟರ್‌ವಲ್ ಕೊಡುವುದಕ್ಕೆ ಸಾಧ್ಯವಾಗುವುದಿಲ್ಲ ಸಾರ್. ಕ್ಲಾಸ್ ರೂಮ್‌ಗಳು ಕಡಿಮೆ ಇರುವುದರಿಂದ, ಎಲ್ಲಾ ವೇಳೆಯಲ್ಲೂ ಒಂದಲ್ಲ ಒಂದು ತರಗತಿಯವರಿಗೆ ಥಿಯರಿ ಕ್ಲಾಸಸ್ ನಡೀತಾಯಿರ್ತವೆ ಸಾರ್."

"ಇನ್ನು ಎಷ್ಟು ರೂಮ್‌ಗಳ ಅಗತ್ಯವಿದೆ ?"

"ಸದ್ಯಕ್ಕೆ ಒಂದು ಹತ್ತು ಕೊಠಡಿಗಳಾದರೆ, ಆಗ ಕಾಮನ್ ಇಂಟರ್‌ವಲ್ ಕೊಡುವ ವೇಳಾಪಟ್ಟಿಯನ್ನು ಹಾಕಬಹುದು ಸಾರ್" ಎಂದು ಪ್ರಿನ್ಸಿಪಾಲರು ಉತ್ತರಿಸಿದರು.

ಆಗ ಮಾದೇಗೌಡರು ಸಭೆಯಲ್ಲಿದ್ದ ಎಲ್ಲಾ ಅಧ್ಯಾಪಕರನ್ನು ಒಮ್ಮೆ ಅವಲೋಕಿಸಿ, ಅನಂತರ ಎಲ್ಲರನ್ನೂ ಉದ್ದೇಶಿಸಿ -

"ನೋಡಿ......ವಿದ್ಯಾರ್ಥಿಗಳು ಪ್ರತಿನಿತ್ಯ ಈ ಕ್ಯಾಂಪಸ್‌ನಲ್ಲಿರುವ ಆರೇಳು ಗಂಟೆಗಳ ಅವಧಿಯಲ್ಲಿ, ಅವರು ರೂಮಿನಲ್ಲಿ ಪಾಠ ಕೇಳ್ಬೇಕು.....ಕ್ಲಾಸ್ ಇಲ್ದೇದ್ರೆ....ರೀಡಿಂಗ್ ರೂಮ್ನಲ್ಲೋ....ಲೈಬ್ರರಿಯಲ್ಲೊ ಕುಳಿತುಕೊಂಡು ಏನನ್ನಾದರೂ ಓದಬೇಕು. ಹೆಚ್ಚಾಗಿ ಬಿಡುವು ದೊರೆತಾಗ, ಆಟದ ಮೈದಾನಕ್ಕೆ ಹೋಗಿ ಆಟಗಳನ್ನಾಡಬೇಕು. ಈ ರೀತಿಯ ಒಂದು ಒಳ್ಳೆಯ ವ್ಯವಸ್ಥೆಯನ್ನು ನಾವೆಲ್ಲರೂ ಸೇರ್ಕೊಂಡು ನಿರ್ಮಾಣ ಮಾಡಿ.....ವಿದ್ಯಾರ್ಥಿಗಳು ಗುಂಪುಗುಂಪಾಗಿ ಎಲ್ಲೆಲ್ಲೂ ನಿಂತ್ಕೊಂಡು.... ಕಾಡು ಹರಟೆ ಹೊಡೆಯುವುದಕ್ಕೆ ಅವಕಾಶವಿಲ್ಲದಂಥ ವಾತಾವರಣವನ್ನು ಕಲ್ಪಿಸಿಕೊಟ್ಟರೆ....ಆಗ ವಿದ್ಯಾರ್ಥಿಗಳಲ್ಲಿ ತಾನೇ ತಾನಾಗಿ ಒಂದು ಶಿಸ್ತು ಮೂಡಿ ಬರ್ತದೆ" ಎಂದು ತಮ್ಮ ಕಳಕಳಿಯನ್ನು ನಮ್ಮೊಡನೆ ಹಂಚಿಕೊಂಡರು.

ಕೊಠಡಿಗಳ ಕೊರತೆಯನ್ನು ನೀಗಿಸಿ, ವಿದ್ಯಾರ್ಥಿಗಳಿಗೆ ಅತ್ಯುತ್ತಮವಾದ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸಿ ಕೊಡಬೇಕೆಂಬ ಸದುದ್ದೇಶದಿಂದ ಕಾರ್ಯಪ್ರವೃತ್ತರಾದ ಮಾದೇಗೌಡರು,....ಭಾರತ ಸ್ವಾತಂತ್ರ್ಯದ ಐವತ್ತನೆಯ ವರ್ಷದ ಸುವರ್ಣ ಮಹೋತ್ಸವದ ಸವಿ ನೆನಪಿಗಾಗಿ 'ಗಾಂಧಿ ಭವನ ಮತ್ತು ಗ್ರಂಥಾಲಯ'ದ ಕಟ್ಟಡವೊಂದನ್ನು ಕಟ್ಟಿಸಿದರು.

ಒಂದು ನೂರು ಅಡಿ ಉದ್ದ ಮತ್ತು ನಲವತ್ತು ಅಡಿಗಳಷ್ಟು ವಿಸ್ತಾರವಿರುವ ಈ ಗ್ರಂಥ ಭಂಡಾರದ ವೈಶಿಷ್ಟ್ಯವೇನೆಂದರೆ ....ಇಲ್ಲಿನ ತೆರೆದ ಕಪಾಟುಗಳಲ್ಲಿ ಮತ್ತು ಬೀರುಗಳಲ್ಲಿ ಇಪ್ಪತ್ತೈದು ಸಾವಿರಕ್ಕಿಂತ ಹೆಚ್ಚು ಗ್ರಂಥಗಳಿವೆ. ಒಳಕ್ಕೆ ಬಂದ ವಿದ್ಯಾರ್ಥಿಗಳು....ಯಾರ ಅಡ್ಡಿ ಆತಂಕವು ಇಲ್ಲದೆ....ತಮಗೆ ಅಗತ್ಯವಾದ ಯಾವುದೇ ಪುಸ್ತಕಗಳನ್ನು ಆಯ್ಕೆ ಮಾಡಿಕೊಂಡು, ಪರಾಮರ್ಶನ ವಿಭಾಗದಲ್ಲಿ (Reference Section) ಕುಳಿತುಕೊಂಡು, ಗಂಟೆಗಟ್ಟಲೆ ಕಾಲ ಓದುವುದಕ್ಕೆ ಅನುಕೂಲಕರವಾದ ಆಸನಗಳ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗಿದೆ.

ಸದಾಕಾಲ ಒಳ್ಳೆಯ ಮತ್ತು ಆದರ್ಶಪೂರ್ಣವಾದ ದೃಶ್ಯಗಳು ವಿದ್ಯಾರ್ಥಿಗಳ ಕಣ್ಣಿಗೆ ಕಾಣುವಂತಾಗಿ, ವಿದ್ಯಾರ್ಥಿಗಳ ಮನಸ್ಸಿನಲ್ಲಿ ಸದ್ಭಾವನೆಗಳು ಉದ್ದೀಪನಗೊಳ್ಳುವಂತಾಗಲೆಂಬ ದೂರದೃಷ್ಟಿಯಿಂದ, ಗಾಂಧಿ ಭವನದ ನಾಲ್ಕು ದಿಕ್ಕಿನ ಗೋಡೆಗಳ ಮೇಲೆ, ಮಹಾತ್ಮ ಗಾಂಧೀಜಿಯವರ ಹುಟ್ಟಿನಿಂದ ಹಿಡಿದು, ಅವರು ಹುತಾತ್ಮರಾಗುವ ತನಕ ಸಂಭವಿಸುವ ಐತಿಹಾಸಿಕ ಘಟನೆಗಳನ್ನು ಪ್ರತಿಬಿಂಬಿಸುವ ಛಾಯಾಚಿತ್ರಗಳನ್ನು, ಅವುಗಳ ಸಾಂದರ್ಭಿಕ ವಿವರಣೆಯೊಂದಿಗೆ, ಕಾಲಾನುಕ್ರಮದಲ್ಲಿ ಜೋಡಿಸಿಡಲಾಗಿದೆ. ಗ್ರಂಥ ಭಂಡಾರದ ಕಪಾಟುಗಳಲ್ಲಿ ಮಹಾತ್ಮ ಗಾಂಧೀಜಿಯವರ ಬದುಕಿನ ಸಾಧನೆಗಳನ್ನು ಕುರಿತ 'ಗಾಂಧಿ ಸಾಹಿತ್ಯ' ಕೃತಿಗಳನ್ನು ಹೆಚ್ಚಿನ ಅಧ್ಯಯನಕ್ಕಾಗಿ ಸಂಗ್ರಹಿಸಿಡಲಾಗಿದೆ.

ಗಾಂಧಿ ಭವನದ ಕಾರ್ಯ ಮುಗಿಯುತ್ತಿದ್ದಂತೆಯೇ, ಕಾಲೇಜಿನ ಮುಖ್ಯ ಕಟ್ಟಡ ಮತ್ತು

ಗಾಂಧಿ ಭವನದ ನಡುವೆಯಿದ್ದ ಉಬ್ಬುತಗ್ಗುಗಳಿಂದ ಕೂಡಿದ ಸುಮಾರು ಒಂದು ಎಕರೆಯಷ್ಟು ಭೂಮಿಯನ್ನು ಸಮತಟ್ಟುಗೊಳಿಸಿ, ಅಲ್ಲಿ ಉದ್ಯಾನವೊಂದನ್ನು ನಿರ್ಮಿಸುವುದರ ಕಡೆಗೆ ಮಾದೇಗೌಡರು ಮನಸ್ಸು ಮಾಡಿದರು. ಅದು ಇಂದು ಹಚ್ಚಹಸಿರಿನ ಹುಲ್ಲುಗಾವಲು ಮತ್ತು ಸುಂದರವಾದ ಹೂಗಿಡಗಳಿಂದ ಕೂಡಿ, ನೋಡುವ ಕಣ್ಮನಗಳಿಗೆ ಅಪೂರ್ವವಾದ ಆನಂದವನ್ನು ಉಂಟುಮಾಡುವಂತೆ ರೂಪುಗೊಂಡಿದೆ. ಇದೇ ಆವರಣದಲ್ಲಿ ಐವತ್ತು ಅರವತ್ತು ವರ್ಷಗಳಿಂದ ಬೃಹದಾಕಾರವಾಗಿ ಬೆಳೆದು ನಿಂತು ಕಂಗೊಳಿಸುತ್ತಿರುವ ನಾಲ್ಕು ಹಿಪ್ಪೆ ಮರಗಳ ಹಸಿರಿನ ಸಿರಿಯು, ಹೊಸದಾಗಿ ಸಿದ್ಧಪಡಿಸಿರುವ ಉದ್ಯಾನಕ್ಕೆ ಮತ್ತಷ್ಟು ಸೊಬಗನ್ನು ನೀಡುತ್ತಿದೆ. ಹಿಪ್ಪೆ ಮರಗಳ ಕೆಳಗೆ ಮತ್ತು ಉದ್ಯಾನದ ಸುತ್ತಮುತ್ತ....ಅಲ್ಲಲ್ಲಿ ಕಲ್‌ಬೆಂಚುಗಳನ್ನು ಹಾಕಿಸಲಾಗಿದೆ. ಒಟ್ಟಾಗಿ ತರಗತಿಗಳನ್ನು ನಡೆಸಲು ಅಗತ್ಯವಾಗಿದ್ದ ಹತ್ತು ಕೊಠಡಿಗಳನ್ನುಳ್ಳ ಕಟ್ಟಡವೊಂದು, ಇದೇ ಅವಧಿಯಲ್ಲಿ ಕಾಲೇಜಿನ ಮುಖ್ಯ ಕಟ್ಟಡಕ್ಕೆ ಹೊಂದಿಕೊಂಡಂತೆ ಹೊಸದಾಗಿ ನಿರ್ಮಾಣಗೊಂಡಿತು.

ಕಳೆದ ಮೂರ್‍ನಾಕು ವರ್ಷಗಳಲ್ಲಿ ಇಷ್ಟೆಲ್ಲಾ ಕಾರ್ಯಗಳನ್ನು ಸತತವಾಗಿ ಮಾಡಿ ಪೂರೈಸಿದ ಮಾದೇಗೌಡರು, ಈ ಶೈಕ್ಷಣಿಕ ವರ್ಷದಿಂದ ಭಾರತೀ ಕಾಲೇಜಿನ ವಿದ್ಯಾರ್ಥಿಗಳು ಮಧ್ಯಾಹ್ನ ಕಾಮನ್ ಇಂಟರ್‌ವಲ್‌ನಲ್ಲಿ ಸುಮಧುರವಾದ ಸಂಗೀತವನ್ನು ಕೇಳುವ ವ್ಯವಸ್ಥೆಯನ್ನು ಕಾರ್ಯರೂಪಕ್ಕೆ ತಂದರು.

ಮೊನ್ನೆ ಒಂದು ಮಧ್ಯಾಹ್ನ ನಾನು ಈ ಉದ್ಯಾನದ ನಡುವೆ ಹಾದು ಹೋಗುತ್ತಾ, ಒಂದು ಕಡೆ ನಿಂತುಕೊಂಡು... ಕ್ಷಣ ಕಾಲ ಸುತ್ತಲೂ ಅವಲೋಕಿಸಿದೆ. ಲೌಡ್ ಸ್ಪೀಕರ್‌ನಿಂದ ಸಂತ ಶಿಶುನಾಳ ಶರೀಫರ ಹಾಡೊಂದು ಪ್ರಸಾರಗೊಳ್ಳುತ್ತಿತ್ತು. ಉದ್ಯಾನದ ಸುಂದರ ಪರಿಸರದಲ್ಲಿ ನಮ್ಮ ಹಳ್ಳಿಗಾಡಿನ ವಿದ್ಯಾರ್ಥಿಗಳು ಅಲ್ಲಲ್ಲಿ ಕುಳಿತುಕೊಂಡು ಹಾಡನ್ನು ಆಲಿಸುತ್ತಾ, ತಾವು ತಂದಿದ್ದ ಬುತ್ತಿಯನ್ನು ಬಿಚ್ಚಿ ಊಟ ಮಾಡುತ್ತಿದ್ದರು. ಮತ್ತೆ ಹಲವರು ಕಲ್‌ಬೆಂಚುಗಳಲ್ಲಿ ಒರಗಿ ಕುಳಿತುಕೊಂಡು ಸುಮಧುರವಾದ ಹಾಡನ್ನು ಕೇಳುತ್ತ ವಿರಮಿಸಿಕೊಳ್ಳುತ್ತಿದ್ದರು. ಕಾಲೇಜಿನ ವಿಸ್ತಾರವಾದ ಒಳ ಆವರಣದಲ್ಲಿ ಅನುರಣನಗೊಳ್ಳುತ್ತಿದ್ದ, ಈ ಸುಗಮ ಸಂಗೀತದ ಇಂಪಾದ ಧ್ವನಿಯು ವಿದ್ಯಾರ್ಥಿಗಳಲ್ಲಿ ಹೊಸ ಬಗೆಯ ಅಭಿರುಚಿಯನ್ನು ಮೂಡಿಸುವಂತೆ ಕಂಡು ಬಂದಿತು.

ಒಬ್ಬ ಕ್ರಿಯಾಶೀಲ ವ್ಯಕ್ತಿಯು ಮನಸ್ಸು ಮಾಡಿದರೆ, ಎಂತಹ ಒಳ್ಳೆಯ ವಾತಾವರಣವನ್ನು ಸೃಷ್ಟಿಸಬಹುದು ಎಂಬುದಕ್ಕೆ ಈ ದೃಶ್ಯ ಸಾಕ್ಷಿಯಾಗಿತ್ತು. ಮಾದೇಗೌಡರು ಕೇವಲ ಕನಸುಗಾರ ಮಾತ್ರವಲ್ಲ....ತನ್ನ ಹಳ್ಳಿಗಾಡಿನ ಜನಸಮುದಾಯದ ಒಳಿತಿಗಾಗಿ ಉಪಯುಕ್ತವಾದುದೆಲ್ಲವನ್ನೂ, ಸುಂದರವಾದುದೆಲ್ಲವನ್ನೂ ನಿರ್ಮಿಸಿ ಕೊಡುವ ಛಲಗಾರರೂ ಆಗಿದ್ದಾರೆ. ಆದುದರಿಂದಲೇ......ಇಂದು ಮೈಸೂರು ವಿಶ್ವವಿದ್ಯಾನಿಲಯದ ಮೆಟ್ಟಿಲುಗಳ ಬಳಿಯಲ್ಲೇ ಇರುವ ಮಹಾರಾಜ ಮತ್ತು ಯುವರಾಜ ಕಾಲೇಜುಗಳಲ್ಲಿ ನಗರ ಪ್ರದೇಶದ ವಿದ್ಯಾರ್ಥಿಗಳಿಗೆ ಅಧ್ಯಯನ

ಮಾಡಲು ಅವಕಾಶವಿರುವ ವಿಷಯಗಳಲ್ಲಿ, ಬಹುತೇಕ ವಿಷಯಗಳು ಕಾಳಮುದ್ದನ ದೊಡ್ಡಿಯ ಭಾರತೀ ಕಾಲೇಜಿನಲ್ಲಿ ಬೋಧಿಸಲ್ಪಡುತ್ತಿದ್ದು, ಹಳ್ಳಿಗಾಡಿನ ಸಾವಿರಾರು ವಿದ್ಯಾರ್ಥಿಗಳು ಶೈಕ್ಷಣಿಕ ರಂಗದಲ್ಲಿ ಉನ್ನತವಾದ ಸಾಧನೆಗಳನ್ನು ಮಾಡಿ, ಔದ್ಯೋಗಿಕ ರಂಗದಲ್ಲಿ ಶ್ರೇಷ್ಠವಾದ ಸ್ಥಾನಮಾನಗಳನ್ನು ಪಡೆಯಲು ಸಹಕಾರಿಯಾಗಿದೆ.



ಕಾಳಮುದ್ದನ ದೊಡ್ಡಿಯ ಭಾರತೀ ವಿದ್ಯಾ ಸಂಸ್ಥೆಯ ಸರ್ವತೋಮುಖವಾದ ಬೆಳವಣಿಗೆಯ ಬಗ್ಗೆ ಜಿ.ಮಾದೇಗೌಡರ ರಚನಾತ್ಮಕ ಯೋಜನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು, ಈ ವಿದ್ಯಾ ಸಂಸ್ಥೆಗೆ ಶೈಕ್ಷಣಿಕವಾಗಿ ಅತ್ಯುತ್ತಮವಾದ ಅಡಿಪಾಯವನ್ನು ಹಾಕಿದವರಲ್ಲಿ ಭಾರತೀ ಪ್ರೌಢಶಾಲೆಯಲ್ಲಿ ಹದಿನಾರು ವರ್ಷಗಳ ಕಾಲ ಮುಖ್ಯೋಪಾಧ್ಯಾಯರಾಗಿ ದುಡಿದ ದಿವಂಗತ ಶ್ರೀ ಹೆಚ್.ಕೆಂಡೇಗೌಡರು ಮತ್ತು ಭಾರತೀ ಕಾಲೇಜಿನಲ್ಲಿ ಹನ್ನೆರಡು ವರ್ಷಗಳ ಕಾಲ ಪ್ರಿನ್ಸಿಪಾಲರಾಗಿ ಕಾರ್ಯನಿರ್ವಹಿಸಿದ ದಿವಂಗತ ಶ್ರೀ ಡಿ.ಚನ್ನಯ್ಯನವರು ಪ್ರಮುಖರಾಗಿದ್ದಾರೆ. ಈ ಹಿರಿಯರಿಬ್ಬರೂ ಭಾರತೀ ವಿದ್ಯಾ ಸಂಸ್ಥೆಯು ಸ್ಥಾಪನೆಗೊಂಡ ಪ್ರಾರಂಭದ ವರ್ಷಗಳಲ್ಲಿ ಸಂಸ್ಥೆಯ ಅಧ್ಯಕ್ಷರಾದ ಜಿ.ಮಾದೇಗೌಡರ ಜೊತೆಯಲ್ಲಿ ತಾವು ಪಡೆದ ವಿಶಿಷ್ಟವಾದ ಅನುಭವಗಳನ್ನು ಆಗಾಗ್ಗೆ ಕಿರಿಯ ಅಧ್ಯಾಪಕರಾಗಿದ್ದ ನಮ್ಮೊಡನೆ ಹೇಳುತ್ತಾ, ಮಾದೇಗೌಡರ ವ್ಯಕ್ತಿತ್ವದ ಬಗ್ಗೆ ಬೆಳಕನ್ನು ಚೆಲ್ಲುತ್ತಿದ್ದರು.

## ದೊಡ್ಡದಾಗಿ ಬೆಳೆಯುತ್ತದೆ

1977 ರ ವರೆಗೆ ಭಾರತೀ ಕಾಲೇಜಿನ ಸಿಬ್ಬಂದಿ ವರ್ಗದ ಸಂಬಳಕ್ಕೆ ಸರ್ಕಾರದ ವತಿಯಿಂದ ಶೇ. 80 ರಷ್ಟು ಮಾತ್ರ ಅನುದಾನವಾಗಿ ದೊರೆಯುತ್ತಿತ್ತು. ಇನ್ನುಳಿದ ಶೇ.20ರಷ್ಟನ್ನು ವಿದ್ಯಾ ಸಂಸ್ಥೆಯ ವತಿಯಿಂದ ತುಂಬಿ......ಪ್ರತಿ ತಿಂಗಳು ವೇತನವನ್ನು ನೀಡುವುದು ಅತ್ಯಂತ ಜವಾಬ್ದಾರಿಯುತವಾದ ಕಾರ್ಯವಾಗಿತ್ತು. ಅಂತಹ ಸಂದರ್ಭಗಳಲ್ಲಿ ಕೆಲವೊಮ್ಮೆ ಹಣಕಾಸಿನ ಮುಗ್ಗಟ್ಟು ಸಂಸ್ಥೆಯನ್ನು ಕಾಡುತ್ತಿತ್ತು. ಆಗ ಒಂದು ದಿನ ಪ್ರಿನ್ಸಿಪಾಲ್ ಡಿ.ಚನ್ನಯ್ಯನವರು ಮಾದೇಗೌಡರೊಡನೆ ಮಾತನಾಡುತ್ತಾ -

"ನಮ್ಮ ಸಂಸ್ಥೆಯು ಇಷ್ಟೊಂದು ಕಷ್ಟಕ್ಕೆ ಒಳಗಾಗ್ಬುಡ್ತಲ್ಲ ಸಾರ್ " ಎಂದು ಕಂಗಾಲಾಗಿ ನುಡಿದಾಗ, ಮಾದೇಗೌಡರು ಪ್ರಿನ್ಸಿಪಾಲರನ್ನು ಸಂತೈಸುತ್ತಾ -

"ನೋಡಿ ಪ್ರಿನ್ಸಿಪಾಲರೇ, ಭಾರತೀ ವಿದ್ಯಾ ಸಂಸ್ಥೆಯನ್ನು ತುಂಬಾ ಒಳ್ಳೆಯ ಉದ್ದೇಶದಿಂದ ಸ್ಥಾಪಿಸಲಾಗಿದೆ. ನಮ್ಮ ಹಳ್ಳಿಯ ಮಕ್ಕಳು ವಿದ್ಯೆ ಕಲಿತು, ದೊಡ್ಡವರಾಗಿ ಬೆಳೆಯಬೇಕೆಂಬ ಆಸೆಯಿಂದ ಇದನ್ನು ಕಟ್ಟಲಾಗಿದೆ. ಇವತ್ತು ಸ್ವಲ್ಪ ಕಷ್ಟ ಇರಬಹುದು.......ಆದರೆ ಮುಂದಕ್ಕೆ ನೀವೇ ನೋಡುವಿರಂತೆ.....ಇದು ಎಷ್ಟು ದೊಡ್ಡದಾಗಿ ಬೆಳೆಯುತ್ತದೆ ಅನ್ನೋದನ್ನ" ಎಂದು ಧೈರ್ಯ ತುಂಬಿದ್ದುದನ್ನು, ಆಗಾಗ್ಗೆ ನೆನಪಿಸಿಕೊಳ್ಳುತ್ತಾ.... "ನಾವು ಯಾವುದೇ ಕಾರ್ಯಕ್ಕೆ

ಕೈ ಹಾಕಿದರೂ, ಮಾದೇಗೌಡರಂತೆ ಸದುದ್ದೇಶವನ್ನು ಹೊಂದಿರಬೇಕು" ಎಂದು ತಿಳಿಯ ಹೇಳುತ್ತಿದ್ದರು.

ಮಾದೇಗೌಡರ ಆಶಯದಂತೆ ಇಂದು ಕಾಳಮುದ್ದನ ದೊಡ್ಡಿಯ ಭಾರತೀ ವಿದ್ಯಾಸಂಸ್ಥೆಯು ಹಳ್ಳಿಗಾಡಿನ ಸಾವಿರಾರು ಮಕ್ಕಳ ಭವಿಷ್ಯವನ್ನು ಅತ್ಯುತ್ತಮವಾಗಿ ರೂಪಿಸುವುದರಲ್ಲಿ ಸಫಲಗೊಂಡಿದೆ. ಮಂಡ್ಯ ಜಿಲ್ಲೆಯ ಮತ್ತು ಕರ್ನಾಟಕ ರಾಜ್ಯದ ಶೈಕ್ಷಣಿಕ ರಂಗದಲ್ಲಿ ಗ್ರಾಮೀಣ ಪ್ರದೇಶದ ಈ ವಿದ್ಯಾ ಸಂಸ್ಥೆಯು ಉತ್ತಮವಾದ ಹೆಸರನ್ನು ಪಡೆದಿದೆ. ಭಾರತೀ ವಿದ್ಯಾ ಸಂಸ್ಥೆಯಲ್ಲಿ ವಿದ್ಯೆಯನ್ನು ಕಲಿತು, ಕರ್ನಾಟಕ ರಾಜ್ಯದ ನಾನಾ ಇಲಾಖೆಗಳಲ್ಲಿ, ಭರತಖಂಡದ ವಿವಿಧ ರಾಜ್ಯಗಳ ಮತ್ತು ವಿದೇಶಗಳ ಸಂಘ ಸಂಸ್ಥೆಗಳಲ್ಲಿ ಅನೇಕ ಬಗೆಯ ಹುದ್ದೆಗಳಲ್ಲಿರುವ ನಮ್ಮ ಹಳ್ಳಿಗಾಡಿನ ಯುವಕ-ಯುವತಿಯರು, ಅಧ್ಯಾಪಕರಾದ ನಮ್ಮನ್ನು ಎಲ್ಲಿಯಾದರು ಭೇಟಿಯಾದಾಗ, ತಮಗೆ ಉತ್ತಮ ವಿದ್ಯೆಯನ್ನು ನೀಡಿ, ಮಾರ್ಗದರ್ಶನ ತೋರಿದ ಭಾರತೀ ವಿದ್ಯಾ ಸಂಸ್ಥೆಯನ್ನು ಅತ್ಯಂತ ಪ್ರೀತಿ ಮತ್ತು ಗೌರವಗಳಿಂದ ಸ್ಮರಿಸಿಕೊಳ್ಳುತ್ತಾ -

"ಮಾದೇಗೌಡರು ಹಳ್ಳಿಗಾಡಿನ ಪ್ರದೇಶದಲ್ಲಿ ಒಂದು ಒಳ್ಳೆಯ ವಿದ್ಯಾ ಸಂಸ್ಥೆಯನ್ನು ಕಟ್ಟಿ ಬೆಳೆಸಿದ್ದರಿಂದ, ನಾವು ವಿದ್ಯೆಯನ್ನು ಕಲಿತು, ಇಂದು ಇಂತಹ ಉತ್ತಮ ಸ್ಥಿತಿಗೆ ಬಂದಿದ್ದೇವೆ ಸಾರ್. ಕಾಳಮುದ್ದನ ದೊಡ್ಡಿಯಲ್ಲಿ ಒಳ್ಳೆಯ ಶಾಲಾ ಕಾಲೇಜುಗಳು ಇಲ್ದೇ ಇದ್ದಿದ್ರೆ..... ಖಂಡಿತವಾಗಿಯೂ ನಮ್ಮ ತಂದೆ ತಾಯಿಗಳಿಗೆ ನಮ್ಮನ್ನು ಮೈಸೂರು -ಬೆಂಗಳೂರಿಗೆ ಇರ್ಲಿ..... ಮಂಡ್ಯದಲ್ಲಿ ಕಾಲೇಜಿಗೆ ಕಳುಹಿಸಿ ಓದಿಸುವಷ್ಟು ಹಣಕಾಸಿನ ಶಕ್ತಿ ಇರಲಿಲ್ಲ ಮತ್ತು ವಿದ್ಯಾಭ್ಯಾಸದ ಬಗ್ಗೆ ಈಗ ಇರುವಂತಹ ಎಚ್ಚರವೂ ಇರಲಿಲ್ಲ" ಎಂದು ವಿವರಿಸುತ್ತಾ ತಮ್ಮ ಜೀವನ ಉತ್ತಮವಾಗಿ ರೂಪುಗೊಳ್ಳಲು ಕಾರಣರಾದ ಜಿ.ಮಾದೇಗೌಡರ ಬಗ್ಗೆ ಕೃತಜ್ಞತೆಗಳನ್ನು ವ್ಯಕ್ತಪಡಿಸುತ್ತಾರೆ.

ಭಾರತೀ ವಿದ್ಯಾಸಂಸ್ಥೆಯ ಸಾಧನೆಗಳನ್ನು ಕುರಿತು ಜಿ.ಮಾದೇಗೌಡರ ಮುಂದೆ ಯಾರಾದರೂ ಗುಣಗಾನ ಮಾಡುತ್ತಾ, ಇದಕ್ಕೆಲ್ಲಾ " ನೀವೇ ಕಾರಣಕರ್ತರೆಂದು " ಹೇಳಿದರೆ, ಅದನ್ನು ಬಹಳ ಸೌಜನ್ಯಪೂರ್ಣವಾಗಿ ನಿರಾಕರಿಸುತ್ತಾ -

"ಅಧ್ಯಾಪಕರು ಮತ್ತು ಅಧ್ಯಾಪಕೇತರರ ಪರಿಶ್ರಮದಿಂದ ಭಾರತೀ ವಿದ್ಯಾಸಂಸ್ಥೆಗೆ ಒಳ್ಳೆಯ ಹೆಸರು ಬಂದಿದೆ. ಈ ಸಾಧನೆಗಳಲ್ಲಿ ನನ್ನ ಪಾತ್ರ ಹೆಚ್ಚಿನದೇನಿಲ್ಲ. ವಿದ್ಯಾಭ್ಯಾಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ವಿದ್ಯಾರ್ಥಿಗಳ ಮತ್ತು ಅಧ್ಯಾಪಕರ ಪಾತ್ರ ಹೆಚ್ಚಿನದು. ಒಳ್ಳೆಯ ಫಲಿತಾಂಶ ಬಂದು, ಪ್ರತಿ ವರ್ಷವೂ ವಿದ್ಯಾರ್ಥಿಗಳು ಹೆಚ್ಚು ಹೆಚ್ಚಾಗಿ ಸೇರುತ್ತಾ, ವಿದ್ಯಾಸಂಸ್ಥೆಯು ದೊಡ್ಡದಾಗಿ ಬೆಳೆಯುತ್ತಿದೆ ಅಂದ್ರೆ ......ಅದರ ಗೌರವ ಅವರಿಗೆ ಸಲ್ಲಬೇಕು" ಎಂದು ನುಡಿದು, ಸಿಬ್ಬಂದಿ ವರ್ಗದವರನ್ನು ಮತ್ತು ವಿದ್ಯಾರ್ಥಿಗಳನ್ನು ಅಭಿನಂದಿಸುತ್ತಾರೆ.

ಕಳೆದ ನಲವತ್ತು ವರ್ಷಗಳಿಂದಲೂ ತಾವು ಮಾಡುತ್ತಿರುವ ಜನಪರವಾದ ಕಾರ್ಯ

ಗಳೆಲ್ಲಕ್ಕೂ ತನುಮನಧನಗಳನ್ನು ಅರ್ಪಿಸಿ, ತಮ್ಮ ಜೊತೆ ಸಹಕರಿಸಿದವರೆಲ್ಲರನ್ನೂ ಕೃತಜ್ಞತೆಯಿಂದ ನೆನೆದುಕೊಳ್ಳುತ್ತಾ -

"ನನಗೆ ಸಹಕಾರ ನೀಡಿದ ಜನ ಪ್ರತಿಯೊಂದು ಹಳ್ಳಿಗಳಲ್ಲೂ ಹಿಂಡುಹಿಂಡೇ ಇದ್ದಾರೆ. ಕಿರುಗಾವಲು ಕ್ಷೇತ್ರದ ಪ್ರತಿ ಹಳ್ಳಿಗಳಲ್ಲೂ ಅನೇಕ ಹಿರಿಯರು, ಕಿರಿಯರು, ಸರಿವಯಸ್ಸಿನವರು ಹಗಲು-ರಾತ್ರಿ ನನ್ನನ್ನು ಮುನ್ನಡೆಸಿದ್ದಾರೆ. ಈ ಸಾಧನೆಗಳೆಲ್ಲವೂ ಜನರಿಂದಲೇ..... ಜನರಿಗಾಗಿಯೇ ನಡೆದ ಕೆಲಸಗಳು. ನಮ್ಮ ಹಳ್ಳಿಗಾಡಿನ ಜನರ ಪ್ರೀತಿ-ಗೌರವಗಳಿಂದಲೇ ಬೆಳೆದಿರುವ ನಾನು, ಈಗಲೂ ಅವರ ಋಣದ ಭಾರದಲ್ಲಿದ್ದೇನೆ. ಜನರಿಗಾಗಿ ಎಷ್ಟು ದುಡಿದರೂ ಅವರ ಋಣ ತೀರದು" ಎನ್ನುವ ಜಿ.ಮಾದೇಗೌಡರ ವಿನಯಶೀಲತೆಯ ನುಡಿಗಳು,ಅವರ ವ್ಯಕ್ತಿತ್ವಕ್ಕೆ ಮತ್ತಷ್ಟು ಮೆರುಗನ್ನು ನೀಡುತ್ತೇವೆ.

ಹಳ್ಳಿಗಾಡಿನ ಜನಸಮುದಾಯಕ್ಕೆ ಅತ್ಯಗತ್ಯವಾಗಿದ್ದ ಅಕ್ಷರ ಜ್ಞಾನಕ್ಕಾಗಿ ವಿದ್ಯಾ ಸಂಸ್ಥೆಗಳನ್ನು ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಬೃಹತ್ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಿದ್ದ ಜಿ. ಮಾದೇಗೌಡರಿಗೆ ಜನಸಮುದಾಯದ ಮಾನಸಿಕ ನೆಮ್ಮದಿಗಾಗಿ ಕಾಳಮುದ್ದನ ದೊಡ್ಡಿಯಲ್ಲಿ ಒಂದು ದೇವರ ಗುಡಿಯನ್ನು ಸಣ್ಣ ಪ್ರಮಾಣದಲ್ಲಿ ಕಟ್ಟಿಸಬೇಕೆಂಬ ಆಸೆಯು ಮೂಡಿತು. ಅಂದು ಅತ್ಯಂತ ಕುಗ್ರಾಮವಾಗಿದ್ದ ಕಾಳಮುದ್ದನ ದೊಡ್ಡಿಯಲ್ಲಿ ಯಾವುದೇ ದೇವಾಲಯಗಳಿರಲಿಲ್ಲ. ದೇವಾಲಯ ನಿರ್ಮಾಣದ ಬಗ್ಗೆ ಮಾದೇಗೌಡರು ಹೊಂದಿದ್ದ ನಿಲುವೇನೆಂದರೆ -

"ಹಗಲು -ರಾತ್ರಿ ಎನ್ನದೇ ಹೊಲಗದ್ದೆಗಳಲ್ಲಿ ಕಷ್ಟಪಟ್ಟು ದುಡಿಯುವ ನಮ್ಮ ರೈತರು ಕಾಳಮುದ್ದನ ದೊಡ್ಡಿಯಲ್ಲಿರುವ ಸಕ್ಕರೆ ಕಾರ್ಖಾನೆಗೆ ಕಬ್ಬನ್ನು ಸರಬರಾಜು ಮಾಡಿ, ಹಣವನ್ನು ಪಡೆದು ಹಿಂತಿರುಗುವಾಗ, ದೇವರ ಗುಡಿಗೆ ಬಂದು ಹಣ್ಣು-ಕಾಯಿ ಮಾಡಿಸಿಕೊಂಡು ಸ್ವಲ್ಪ ಕಾಲ ಸಂತೋಷವಾಗಿ ಕಾಲ ಕಳೆದು, ತಮ್ಮ ತಮ್ಮ ಊರುಗಳಿಗೆ ಹೋಗುವಂತಾಗಬೇಕು" ಎಂಬುದಾಗಿತ್ತು. ಆದರೆ ಕಾಳಮುದ್ದನ ದೊಡ್ಡಿಯಲ್ಲಿ ದೇವಸ್ಥಾನ ನಿರ್ಮಾಣಕ್ಕೆ ಸೂಕ್ತವಾದ ನಿವೇಶನವು ಲಭಿಸದೆ, ಈ ಒಂದು ಆಸೆಯು ಮಾದೇಗೌಡರ ಮನದಲ್ಲಿ ಉಳಿದುಕೊಂಡಿತ್ತು.

1988ರ ಅವಧಿಯಲ್ಲಿ ಹನುಮಂತನಗರದ ಅತ್ಯಂತ ಎತ್ತರದ ಪ್ರದೇಶದಲ್ಲಿ ಭಾರತೀ ವಸತಿ ಪ್ರೌಢಶಾಲೆಯನ್ನು ಪ್ರಾರಂಭಿಸಿದಾಗ, ಅಲ್ಲೇ ಒಂದು ಭಾಗದಲ್ಲಿ ದೇಗುಲ ನಿರ್ಮಾಣದ ಆಸೆಯನ್ನು ಕಾರ್ಯರೂಪಕ್ಕೆ ತರಲು ನಿರ್ಧರಿಸಿದರು. ಅದೇ ಇಂದು ಶ್ರೀ ಆತ್ಮಲಿಂಗೇಶ್ವರ ದೇವಸ್ಥಾನವಾಗಿ ತಲೆ ಎತ್ತಿ ನಿಂತಿದೆ. ಅತ್ಯಂತ ಬೃಹದಾಕಾರದ, ಅಂದ ಚಂದದ ಕಟ್ಟಡ ವಿನ್ಯಾಸದ ಜೊತೆಗೆ, ದೇವಾಲಯದ ವಿಸ್ತಾರವಾದ ಪ್ರಾಕಾರದ ಒಳಗಿರುವ ಹಚ್ಚಹಸುರಿನ ಹುಲ್ಲಿನ ಮೈದಾನ ಮತ್ತು ಬಣ್ಣ ಬಣ್ಣದ ಹೂಗಿಡಗಳಿಂದ ಕೂಡಿದ ಉದ್ಯಾನದ ಪ್ರಕೃತಿ ಸೌಂದರ್ಯವು, ಇಲ್ಲಿಗೆ ಬರುವ ಭಕ್ತರ ಮತ್ತು ಪ್ರವಾಸಿಗರ ಕಣ್ಮನಗಳಿಗೆ ಅಪಾರವಾದ ಆನಂದವನ್ನು ಉಂಟು

ಮಾಡುವಂತಿದೆ. ಈಗ ಹನುಮಂತನಗರದ ಶ್ರೀ ಆತ್ಮಲಿಂಗೇಶ್ವರ ದೇವಾಲಯದ ಕ್ಷೇತ್ರವು ಕರ್ನಾಟಕದ ಪ್ರವಾಸೋದ್ಯಮ ಇಲಾಖೆಯಿಂದ ಗುರುತಿಸಲ್ಪಟ್ಟಿದ್ದು, ಕರ್ನಾಟಕ ರಾಜ್ಯದ ಪ್ರವಾಸಿ ಕೇಂದ್ರಗಳಲ್ಲಿ ಒಂದೆಂದು ಪ್ರಸಿದ್ಧಿಗೆ ಬಂದಿದೆ.

ಈ ದೇಗುಲ ನಿರ್ಮಾಣದ ಹಂತದಲ್ಲಿ ಒಂದು ದಿನ ಭಾರತೀ ಕಾಲೇಜಿನ ರಾಷ್ಟ್ರೀಯ ಸೇವಾ ಯೋಜನೆಯ ವಿದ್ಯಾರ್ಥಿಗಳು ಮಾದೇಗೌಡರೊಡನೆ ಮಾತನಾಡುತ್ತಾ -

"ಸಾರ್......ಈಗಾಗಲೇ ನೀವು ಸ್ಥಾಪಿಸಿರುವ ಸಕ್ಕರೆ ಕಾರ್ಖಾನೆ ಮತ್ತು ವಿದ್ಯಾ ಸಂಸ್ಥೆಗಳು ಭರತಖಂಡದ ಆಧುನಿಕ ದೇವಾಲಯಗಳಂತೆ ಕಂಗೊಳಿಸುತ್ತಿರುವಾಗ, ಇಂತಹ ಒಂದು ದೇವಾಲಯದ ಅಗತ್ಯವೇನಿದೆ ಸಾರ್ ? ......ಕುವೆಂಪು ಅವರ ದೃಷ್ಟಿಯಲ್ಲಿ 'ದೇವಸ್ಥಾನಗಳು ಪುರೋಹಿತಶಾಹಿಯ ಸಂಕೇತ. ಜನಸಮುದಾಯದ ಮನದಲ್ಲಿರುವ ಮೌಢ್ಯವನ್ನು ಮತ್ತಷ್ಟು ಹೆಚ್ಚು ಮಾಡುವ ಕೇಂದ್ರಗಳು.' ಕುವೆಂಪು ಅವರು ಎಂದೂ ದೇವಸ್ಥಾನಗಳಿಗೆ ಹೋದವರಲ್ಲ. ಆದ್ದರಿಂದ ಇಂತಹ ದೇವಸ್ಥಾನಕ್ಕೆ ಬದಲಾಗಿ ಇನ್ನೊಂದು ಶಾಲೆಯನ್ನೋ ಅಥವಾ ಆಸ್ಪತ್ರೆಯನ್ನೊ ಕಟ್ಟಿಸಿದ್ದರೆ ಚೆನ್ನಾಗಿರುತ್ತಲ್ಲವೇ ಸಾರ್ ?" ಎಂದು ಪ್ರಶ್ನಿಸಿದರು.

ವಿದ್ಯಾರ್ಥಿಗಳ ವೈಚಾರಿಕ ಪ್ರಶ್ನೆಗೆ ಮಾದೇಗೌಡರು ಪ್ರತಿಕ್ರಿಯಿಸುತ್ತಾ -

"ನೋಡ್ರಪ್ಪಾ.......ಸಮಾಜದಲ್ಲಿರುವ ಜನರೆಲ್ಲಾ ಮಹಾಕವಿ ಕುವೆಂಪು ಅವರಂತೆ ವಿಚಾರವಂತರಲ್ಲ. ನಮ್ಮ ಹಳ್ಳಿಗಾಡಿನ ಜನರಲ್ಲಿ ಬಹುತೇಕ ಮಂದಿ, ದೇವರ ಬಗ್ಗೆ ಭಕ್ತಿ ಮತ್ತು ನಂಬಿಕೆಗಳನ್ನು ಇಟ್ಟುಕೊಂಡಿದ್ದಾರೆ. 'ಆಗಾಗ್ಗೆ ದೇವಸ್ಥಾನಕ್ಕೆ ಬಂದು, ದೇವರ ದರ್ಶನ ಮಾಡ್ಕೊಂಡು, ಹಣ್ಣು-ಕಾಯಿ ಮಾಡಿಸ್ಕೊಂಡು, ಕೈ ಮುಕ್ಕೊಂಡು ಹೋದರೆ......ತಮ್ಮ ಜೀವನದಲ್ಲಿ ಒಳ್ಳೆಯದಾಗುತ್ತೆ. ತಮಗೆ ಒಳ್ಳೆಯ ಬುದ್ಧಿ ಬರುತ್ತೆ. ತಮ್ಮ ಬದುಕಿನಲ್ಲಿ ಬಂದ ಕಷ್ಟಗಳು ಪರಿಹಾರವಾಗ್ತವೆ'.....ಅನ್ನು ಭಾವನೆ ಹಿಂದಿನಿಂದಲೂ ಇದೆ.......ಈಗಲೂ ಇದೆ. ಆದ್ದರಿಂದ ಜನರ ಮನಸ್ಸಿಗೆ ಒಂದು ಸದ್ಗುಣವನ್ನು ಪ್ರೇರಿಸುವಂಥ ಮತ್ತು ನೆಮ್ಮದಿಯನ್ನು ನೀಡುವಂಥ ಒಂದು ಜಾಗ ಇರ್ಲಿ ಅಂತ, ಇಲ್ಲಿ ದೇವಸ್ಥಾನವನ್ನು ಕಟ್ಟಿಸುತ್ತಿದ್ದೇನೆ" ಎಂದು ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು.



ಸರಿ ಸುಮಾರು ಮೂವತ್ತೈದು ವರ್ಷಗಳ ಸಕ್ರಿಯ ರಾಜಕಾರಣದ ಸಾರ್ವಜನಿಕ ಜೀವನದಲ್ಲಿ ಮಾದೇಗೌಡರು ಜನಪರವಾದ ಅನೇಕ ಕಾರ್ಯಗಳನ್ನು ಮಾಡಿದ್ದಾರೆ. ಅವುಗಳಲ್ಲಿ ಬಹು ಪ್ರಮುಖವಾದ ಮತ್ತೊಂದು ಕಾರ್ಯವೆಂದರೆ "ಮಂಡ್ಯ ನಗರಕ್ಕೆ ಹತ್ತು ಕಿಲೋ ಮೀಟರ್ ದೂರದಲ್ಲಿರುವ ಬಿ.ಹೊಸೂರು ಲೇಬರ್ ಕಾಲೋನಿಯಲ್ಲಿ 'ಮಹಾತ್ಮ ಗಾಂಧಿ ಸ್ಮಾರಕ ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ' ಯನ್ನು ಸ್ಥಾಪಿಸಲು ಮಾಡಿದ ಸಕಾಲಿಕವಾದ ಆಲೋಚನೆ ಮತ್ತು ಅದನ್ನು ಆದಷ್ಟು ಬೇಗ ಕಾರ್ಯರೂಪಕ್ಕೆ ತರುವುದರಲ್ಲಿ ಮಾಡಿದ ಪ್ರಯತ್ನ ಶೀಲತೆ."

## ಹದಿನೈದು ದಿನಗಳಲ್ಲಿ ಸ್ಥಾಪನೆಗೊಂಡ ಆಸ್ಪತ್ರೆ

1969ರ ವರ್ಷಾಂತ್ಯದಲ್ಲಿ ಮಂಡ್ಯ ಸಕ್ಕರೆ ಕಾರ್ಖಾನೆಯ ಛೇರ್ಮನ್ನರಾಗಿ ಜಿ.ಮಾದೇಗೌಡರು ಅಧಿಕಾರ ವಹಿಸಿಕೊಂಡ ದಿನವೇ, ಬಿ.ಹೊಸೂರು ಲೇಬರ್ ಕಾಲೋನಿಯಲ್ಲಿರುವ ಮೈಷುಗರ್ ಕಂಪನಿಗೆ ಸೇರಿದ ಆಸ್ತಿಯೊಂದರ ಹರಾಜು ನಡೆಯಲಿರುವ ವಿಷಯವು ಅಂದು ಮೈಷುಗರ್ ಕಂಪನಿಯಲ್ಲಿ ಕಾರ್ಯದರ್ಶಿಗಳಾಗಿದ್ದ ಶ್ರೀ ಕೆ.ಸಿ.ವೀರೇಗೌಡರಿಂದ ತಿಳಿದುಬಂತು. ಹರಾಜಿನ ಸ್ಥಳಕ್ಕೆ ಹೋಗುತ್ತಿದ್ದ ಕಾರ್ಯದರ್ಶಿಗಳ ಜೊತೆ ಛೇರ್ಮನ್ನರಾದ ಮಾದೇಗೌಡರು ಕುತೂಹಲದಿಂದ ಅಲ್ಲಿಗೆ ತೆರಳಿದರು. ಆ ವೇಳೆಗಾಗಲೇ ಅಲ್ಲಿ ನೂರಾರು ಮಂದಿ ಬಿಡ್‌ದಾರರು ಅಲ್ಲಿನ ಆಸ್ತಿಯನ್ನು ಹರಾಜಿನಲ್ಲಿ ಕೊಳ್ಳಲು ತಯಾರಾಗಿ ಜಮಾಯಿಸಿದ್ದರು.

ಮಾದೇಗೌಡರು ಒಮ್ಮೆ ಆಸ್ತಿಯೆಲ್ಲವನ್ನೂ ಅಲ್ಲೆಲ್ಲಾ ಸುತ್ತಾಡುತ್ತಾ ಅವಲೋಕಿಸ ತೊಡಗಿದರು. ಸುಮಾರು 65 ಎಕರೆ ಭೂಮಿಯ ವಿಸ್ತೀರ್ಣದಲ್ಲಿ 70 ಕ್ಕಿಂತ ಹೆಚ್ಚು ಮನೆಗಳಿಂದ ಕೂಡಿದ ಅತ್ಯಂತ ಅಮೂಲ್ಯವಾದ ಆಸ್ತಿಯು ಅದಾಗಿತ್ತು. ಅಚ್ಚುಕಟ್ಟಾದ ಆರ್.ಸಿ.ಸಿ.ಕಟ್ಟಗಳಿಂದ ಕೂಡಿದ ಈ ಆಸ್ತಿಯನ್ನು ಯಾರ್‍ಯಾರಿಗೋ ಬಿಡಿಬಿಡಿಯಾಗಿ ಹರಾಜು ಹಾಕುವುದರ ಬದಲು ಇದನ್ನೊಂದು ಸಾರ್ವಜನಿಕ ಸೇವಾ ಕೇಂದ್ರವನ್ನಾಗಿ ಪರಿವರ್ತಿಸಿದರೆ, ಗ್ರಾಮೀಣ ಸಮುದಾಯಕ್ಕೆ ನಿರಂತರವಾಗಿ ಉಪಯುಕ್ತವಾಗುವುದೆಂಬ ಜನಪರ ಆಲೋಚನೆಯು ಮಾದೇಗೌಡರ ಮನದಲ್ಲಿ ಆ ಕ್ಷಣದಲ್ಲಿ ಮೂಡಿತು. ಹರಾಜು ನಡೆಸಲು ಸಿದ್ಧರಾಗುತ್ತಿದ್ದ ಮೈಷುಗರ್ ಕಂಪನಿಯ ಅಧಿಕಾರಿಗಳನ್ನು ಒಂದು ಪಕ್ಕಕ್ಕೆ ಕರೆದು "ಅಂದಿನ ಹರಾಜನ್ನು ತಾತ್ಕಾಲಿಕವಾಗಿ ರದ್ದುಪಡಿಸಿ, ಹರಾಜನ್ನು ಮುಂದೂಡುವಂತೆ" ಆದೇಶ ನೀಡಿ, ಮಂಡ್ಯಕ್ಕೆ ಹಿಂತಿರುಗಿದರು.

ಮಂಡ್ಯದಲ್ಲಿ ಶ್ರೀ ಕೆ.ವಿ.ಶಂಕರಗೌಡರನ್ನು ಭೇಟಿ ಮಾಡಿ, ತಮ್ಮ ಮನದ ಆಲೋಚನೆಯನ್ನು ಅವರ ಮುಂದಿಡುತ್ತಾ -

"ನೋಡಿ ಸಾರ್, ನಮ್ಮ ಹೆಚ್.ಕೆ.ವೀರಣ್ಣಗೌಡರು ಬಹಳಷ್ಟು ವರ್ಷಗಳಿಂದಲೂ ಕ್ಷಯ ರೋಗದ ಆಸ್ಪತ್ರೆಯೊಂದನ್ನು ಮಂಡ್ಯ ಜಿಲ್ಲೆಯಲ್ಲಿ ಸ್ಥಾಪನೆ ಮಾಡಬೇಕೆಂದು ಬಹಳ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಇದುವರೆಗೂ ಸಾಧ್ಯವಾಗಿಲ್ಲ. ನಮ್ಮ ಜಿಲ್ಲೆಯ ಕ್ಷಯ ರೋಗಿಗಳೆಲ್ಲಾ ದೂರದ ಮೈಸೂರಿನ 'ಸ್ಯಾನಿಟೋರಿಯಂ' ಗೆ ಹೋಗಲಾಗದೆ, ತುಂಬಾ ತೊಂದರೆ ಅನುಭವಿಸುತ್ತಿದ್ದಾರೆ. ಈಗ ವೀರಣ್ಣಗೌಡರ ಆಸೆಯನ್ನು ಈಡೇಸುವಂಥ ಮತ್ತು ಆ ಮೂಲಕ ಮಂಡ್ಯ ಜಿಲ್ಲೆಯ ಕ್ಷಯ ರೋಗಿಗಳಿಗೆ ಉತ್ತಮವಾದ ಆರೋಗ್ಯ ಸೌಲಭ್ಯವನ್ನು ಒದಗಿಸಿಕೊಡುವಂಥ ಒಂದು ಒಳ್ಳೆಯ ಅವಕಾಶ ಸಿಕ್ಕಿದೆ.

ಬಿ.ಹೊಸೂರು ಲೇಬರ್ ಕಾಲೋನಿಯ ಪ್ರದೇಶ ಅತ್ಯಂತ ಎತ್ತರವಾದ ಜಾಗದಲ್ಲಿದೆ. ಕ್ಷಯ ರೋಗದ ಆಸ್ಪತ್ರೆಗೆ ಅಗತ್ಯವಾದ ಪ್ರಶಾಂತವಾದ ಪರಿಸರವಿದೆ. ತಕ್ಷಣವೇ ಆಸ್ಪತ್ರೆಯನ್ನು ಪ್ರಾರಂಭ ಮಾಡಿ, ರೋಗಿಗಳನ್ನು ಸೇರಿಸಿಕೊಳ್ಳುವುದಕ್ಕೆ ಬೇಕಾದ ಕಟ್ಟಡಗಳಿವೆ. ರಾಜ್ಯ ಸರ್ಕಾರದ

ವತಿಯಿಂದ ಒಂದು ಸರ್ಕಾರಿ ಆಸ್ಪತ್ರೆಯನ್ನು ಮಂಜೂರು ಮಾಡಿಸಿದರೆ, ಮಂಡ್ಯ ಜಿಲ್ಲೆಗೆ ಒಂದು ಸುಸಜ್ಜಿತವಾದ ಕ್ಷಯ ರೋಗದ ಆಸ್ಪತ್ರೆಯು ದೊರಕಿದಂತಾಗುತ್ತದೆ." ಎಂದು ವಿವರವಾಗಿ ತಿಳಿಸಿದರು.

1969ರ ಅವಧಿಯಲ್ಲಿ ಕರ್ನಾಟಕ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಶ್ರೀ ವೀರೇಂದ್ರ ಪಾಟೀಲರ ಮಂತ್ರಿಮಂಡಲದಲ್ಲಿ ಶಿಕ್ಷಣ ಸಚಿವರಾಗಿದ್ದ ಶ್ರೀ ಕೆ.ವಿ.ಶಂಕರಗೌಡರು ಕೂಡಲೇ ಮಾದೇಗೌಡರ ಯೋಜನೆಯನ್ನು ಅನುಮೋದಿಸಿದರು. ಇಬ್ಬರೂ ಜೊತೆಗೂಡಿ ಶ್ರೀ ವೀರೇಂದ್ರ ಪಾಟೀಲರನ್ನೂ ಭೇಟಿ ಮಾಡಿ, ಕ್ಷಯ ರೋಗ ಆಸ್ಪತ್ರೆಯ ವಿಷಯವನ್ನು ಪ್ರಸ್ತಾಪಿಸಿದರು. ಮರುಕ್ಷಣದಲ್ಲಿಯೇ ಶ್ರೀ ವೀರೇಂದ್ರ ಪಾಟೀಲರು ತಮ್ಮ ಸಂಪುಟದಲ್ಲಿ ಆರೋಗ್ಯ ಮಂತ್ರಿಗಳಾಗಿದ್ದ ಶ್ರೀ ವೈ.ರಾಮಕೃಷ್ಣ ಅವರನ್ನು ತಮ್ಮ ಚೇಂಬರಿಗೆ ಕರೆಸಿಕೊಂಡು-

"ನೋಡಿ....ಇದೇನೋ....ಜಿ.ಮಾದೇಗೌಡರು ಮಂಡ್ಯ ನಗರಕ್ಕೆ ಬಹಳ ಹತ್ತಿರದಲ್ಲೆ ಒಂದು ಕ್ಷಯ ರೋಗ ಆಸ್ಪತ್ರೆಯ ಸ್ಥಾಪನೆಗೆ ಅಗತ್ಯವಾದ ವಿಸ್ತಾರವಾದ ಭೂಮಿ ಕೊಡ್ತೀವಿ... ರೋಗಿಗಳ ಮತ್ತು ಆಸ್ಪತ್ರೆಯ ಸಿಬ್ಬಂದಿ ವರ್ಗದವರು ಇರುವುದಕ್ಕೆ ಬೇಕಾದ ಕಟ್ಟಡಗಳನ್ನು ಕೊಡ್ತೀವಿ ಅಂತ ಮಂಡ್ಯ ಜಿಲ್ಲಾ ಜನತೆಯ ಪರವಾಗಿ ಮುಂದೆ ಬಂದಿದ್ದಾರೆ. ನೀವು ಮಂಡ್ಯಕ್ಕೆ ಭೇಟಿ ನೀಡಿ, ಉದ್ದೇಶಿತ ಸ್ಥಳವನ್ನು ಪರಿಶೀಲನೆ ಮಾಡಿ, ಸರ್ಕಾರಕ್ಕೆ ಒಂದು ವರದಿಯನ್ನು ಕೊಡಿ. ಎಲ್ಲಾ ಅನುಕೂಲವಾಗಿ ಕಂಡುಬಂದರೆ, ತಕ್ಷಣ ಅಲ್ಲಿಗೆ ಒಂದು ಆಸ್ಪತ್ರೆಯನ್ನು ಮಂಜೂರು ಮಾಡೋಣ" ಎಂದು ಆದೇಶಿಸಿದರು.

ಮುಖ್ಯಮಂತ್ರಿಗಳ ಆದೇಶದಂತೆ ಆರೋಗ್ಯ ಸಚಿವರು ಮಂಡ್ಯದ ಬಿ.ಹೊಸೂರು ಲೇಬರ್ ಕಾಲೋನಿಗೆ ಭೇಟಿ ನೀಡಿ, ಅಧಿಕಾರಿಗಳೊಡನೆ ಸ್ಥಳ ಪರಿಶೀಲನೆ ಮತ್ತು ಸಮಾಲೋಚನೆ ಮಾಡಿ, ಒಂದೆರಡು ದಿನಗಳಲ್ಲಿ ರಾಜ್ಯ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದರು. ಶ್ರೀ ವೀರೇಂದ್ರ ಪಾಟೀಲರ ಸಚಿವ ಸಂಪುಟವು ಆಸ್ಪತ್ರೆಯನ್ನು ಮಂಜೂರು ಮಾಡಿತು.

1969ರ ಡಿಸೆಂಬರ್ 5ನೆಯ ತಾರೀಖಿನ ಶುಕ್ರವಾರದಂದು ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರಿಂದ ಬಿ.ಹೊಸೂರು ಕಾಲೋನಿಯಲ್ಲಿ 'ಮಹಾತ್ಮ ಗಾಂಧಿ ಸ್ಮಾರಕ ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ' ಯ ಪ್ರಾರಂಭೋತ್ಸವ ನೆರವೇರಿತು. ಆಸ್ಪತ್ರೆಯ ವಿಭಾಗಗಳ ಉದ್ಘಾಟನೆಯನ್ನು ವಿದ್ಯಾ ಸಚಿವರಾದ ಶ್ರೀ ಕೆ.ವಿ.ಶಂಕರಗೌಡರು ನಡೆಸಿಕೊಟ್ಟರು. ಆರೋಗ್ಯ ಸಚಿವರಾದ ಶ್ರೀ ವೈ.ರಾಮಕೃಷ್ಣ ಅವರ ಅಧ್ಯಕ್ಷತೆಯಲ್ಲಿ ಸಮಾರಂಭವು ಯಶಸ್ವಿಯಾಗಿ ಜರುಗಿತು. ಈ ಸಮಾರಂಭಕ್ಕೆ ಆಗಮಿಸಿದ್ದ ರಾಜ್ಯ ಸರ್ಕಾರದ ಆರೋಗ್ಯ ಇಲಾಖೆಯ ನಿರ್ದೇಶಕರು ಸಭೆಯಲ್ಲಿ ಮಾತನಾಡುತ್ತಾ-

"ಕರ್ನಾಟಕ ರಾಜ್ಯದ ಆರೋಗ್ಯ ಇಲಾಖೆಯ ಇತಿಹಾಸದಲ್ಲೇ ಕೇವಲ ಹದಿನೈದು ದಿನಗಳ ಅವಧಿಯಲ್ಲಿ ಇಂತಹ ಒಂದು ದೊಡ್ಡ ಆಸ್ಪತ್ರೆಯ ಮಂಜೂರಾಗಿ, ಸ್ಥಾಪನೆಗೊಂಡು,

ಕಾರ್ಯಪ್ರವೃತ್ತವಾಗಿರುವುದು ಇದೇ ಮೊದಲನೆಯದೆಂದು" ತಮ್ಮ ಅಪಾರವಾದ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

ನಂತರದ ದಿನಗಳಲ್ಲಿ ಮಾದೇಗೌಡರು ಮಂಡ್ಯ ಸಕ್ಕರೆ ಕಾರ್ಖಾನೆಗೆ ರೈತರು ಸರಬರಾಜು ಮಾಡಿದ್ದ ಕಬ್ಬಿನ ದರವನ್ನು ಟನ್ ಒಂದಕ್ಕೆ ಎರಡು ರೂ.ಗಳಷ್ಟು ಹೆಚ್ಚು ಮಾಡಿ, ಅದರಲ್ಲಿ ಒಂದು ರೂಪಾಯಿಯನ್ನು ರೈತರಿಗೆ ನೀಡಿ, ಇನ್ನುಳಿದ ಒಂದು ರೂಪಾಯಿಯನ್ನು ಕಬ್ಬು ಬೆಳೆಗಾರರ ಕೊಡುಗೆಯಾಗಿ ಸಂಗ್ರಹಿಸಿ, ಆಸ್ಪತ್ರೆಯ ನಿರ್ಮಾಣಕ್ಕಾಗಿ, ಕಾರ್ಖಾನೆಯ ವತಿಯಿಂದ ನೀಡಿದ್ದ ಬಿ.ಹೊಸೂರು ಲೇಬರ್ ಕಾಲೋನಿಯ ಆಸ್ತಿಯ ಮೌಲ್ಯವನ್ನು ಮೈಷುಗರ್ ಕಂಪನಿಗೆ ಕಟ್ಟಿಸಿದರು.

ಗ್ರಾಮೀಣ ಜನತೆಯ ಆರೋಗ್ಯ ಸಂರಕ್ಷಣೆಗಾಗಿ ಜಿ. ಮಾದೇಗೌಡರು ವೈಯಕ್ತಿಕವಾಗಿ ನೀಡಿರುವ ಒಂದು ಕೊಡುಗೆಯು ಅಪೂರ್ವವಾದುದು. ತಾವು ಹುಟ್ಟಿದ ಊರಾದ ಮದ್ದೂರು ತಾಲ್ಲೂಕಿನ ಗುರುದೇವರಹಳ್ಳಿ ಮತ್ತು ಸುತ್ತಮುತ್ತಣ ಗ್ರಾಮಗಳ ಜನಸಮುದಾಯಕ್ಕೆ ವೈದ್ಯಕೀಯ ಸೌಲಭ್ಯ ದೊರಕುವಂತಾಗಲೆಂಬ ಉದ್ದೇಶದಿಂದ ಊರಿನಲ್ಲಿದ್ದ ಬೆಲೆ ಬಾಳುವ ತಮ್ಮ ತೋಟದ ಮನೆಯೊಂದನ್ನೇ ರಾಜ್ಯ ಸರ್ಕಾರಕ್ಕೆ ದಾನ ಮಾಡಿ, ಅಲ್ಲಿ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರವನ್ನು ಮಂಜೂರು ಮಾಡಿಸಿದರು. ದಿನಾಂಕ 25-8-1988ರಂದು ಮಾದೇಗೌಡರ ತಾಯಿತಂದೆಗಳಾದ ಶ್ರೀಮತಿ ಕಾಳಮ್ಮ ಮತ್ತು ಶ್ರೀ ಪುಟ್ಟೇಗೌಡ ಸ್ಮಾರಕ ಪ್ರಾಥಮಿಕ ಆರೋಗ್ಯ ಕೇಂದ್ರವು ಪ್ರಾರಂಭಗೊಂಡು, ಹಳ್ಳಿಗಾಡಿನ ಜನತೆಗೆ ಆರೋಗ್ಯ ಸೌಲಭ್ಯವನ್ನು ಒದಗಿಸುತ್ತಿದೆ.



ಮಾದೇಗೌಡರ ನಡೆನುಡಿಗಳನ್ನು ಮತ್ತು ಸಾಧನೆಗಳನ್ನು ಬಹು ಹತ್ತಿರದಿಂದ ನೋಡುತ್ತಿರುವ ಹಳ್ಳಿಗಾಡಿನ ಜನರು, ಅವರ ವ್ಯಕ್ತಿತ್ವದ ಬಗ್ಗೆ ಅಪಾರವಾದ ಮೆಚ್ಚುಗೆಯನ್ನು ಹಲವು ಬಗೆಗಳಲ್ಲಿ ವ್ಯಕ್ತಪಡಿಸುತ್ತಿರುತ್ತಾರೆ. ಕಳೆದ ಕೆಲವು ವರ್ಷಗಳ ಹಿಂದೆ ಕಾಳಮುದ್ದನ ದೊಡ್ಡಿಯಲ್ಲಿ ರೈತರೊಬ್ಬರೊಡನೆ ನಾನು ಮಾತನಾಡುತ್ತಿದ್ದಾಗ, ಅವರು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಇಲ್ಲಿ ದಾಖಲಿಸುತ್ತಿದ್ದೇನೆ.

## ಕಾಲ್ನಡೇಲಿ ಎಲ್ಲಾ ಒಳ್ಳೇದಾಯ್ತು

ಒಂದು ದಿನ ಸಂಜೆ ಕಾಳಮುದ್ದನ ದೊಡ್ಡಿಯ ರಸ್ತೆಯೊಂದರಲ್ಲಿ ನಾನು ಒಬ್ಬಂಟಿಯಾಗಿ ನಡೆದುಕೊಂಡು ಬರುತ್ತಿದ್ದಾಗ, ಸುಮಾರು ಅರವತ್ತು ವರ್ಷ ವಯಸ್ಸಿನ ರೈತರೊಬ್ಬರು ಮಾರ್ಗ ಮಧ್ಯದಲ್ಲಿ ಜೊತೆಗೂಡಿದರು. ಚಿರಪರಿಚಿತರಾಗಿದ್ದ ಅವರೊಡನೆ ಲೋಕಾಭಿರಾಮವಾಗಿ ಮಾತನಾಡುತ್ತಾ, ಈ ಮೊದಲು ಹತ್ತಾರು ಸಣ್ಣ - ಪುಟ್ಟ ಮನೆಗಳಿಂದ ಕೂಡಿ ಕುಗ್ರಾಮವಾಗಿದ್ದ ಕಾಳಮುದ್ದನ ದೊಡ್ಡಿಯು.....ಇತ್ತೀಚಿನ ವರ್ಷಗಳಲ್ಲಿ ನಗರದಂತೆ ಬೆಳೆಯುತ್ತಿರುವುದನ್ನು ಕುರಿತು ಪ್ರಸ್ತಾಪಿಸಿದಾಗ, ಅವರು ನನ್ನನ್ನು ಉದ್ದೇಶಿಸಿ-

"ನೋಡಿ ಮೇಷ್ಟ್ರೆ......ಓಂದೆ ರಾಮ ಕಾಡ್ನಲ್ಲಿ ಬರುತ್ತಿದ್ದಾಗ.....ಅವನ ಪಾದ ಸೋಕಿದ ಒಂದು ಕಲ್ಲಿಗೆ ಜೀವ ಬಂದು.....ಹೆಣ್ಣಾಗಿ ಎದ್ದು ಮುಂದ್‌ಮುಖನಾಗಿ ನಡೀತಂತಲ್ಲ......ಹಂಗೆ...ನಮ್ಮ ಮಾದೇಗೌಡ್ನ ಕಾಲ್ನಡೇಲಿ ಇಲ್ಲೆಲ್ಲಾ ಒಳ್ಳೇದಾಯ್ತು" ಎಂದರು.

ವಾಲ್ಮೀಕಿ ರಾಮಾಯಣದಲ್ಲಿ ನಿರೂಪಣೆಗೊಂಡಿರುವ ರಾಮ ಮತ್ತು ಅಹಲ್ಯೆಯ ಪ್ರಸಂಗವನ್ನು ಉಪಮೆಯನ್ನಾಗಿ ಹೇಳಿದ್ದನ್ನು ಕೇಳಿ, ಸ್ವಲ್ಪ ತಬ್ಬಿಬ್ಬಾದ ನಾನು-

"ಹಂಗಾದ್ರೆ ಮಾದೇಗೌಡರಿಂದ ಈ ಭಾಗದ ಜನಕ್ಕೆ ಅಷ್ಟೊಂದು ಒಳ್ಳೆದಾಗಿದೆಯೆ?" ಎಂದು ಉದ್ದೇಶ ಪೂರ್ವಕವಾಗಿ ಕೆದಕಿ ಕೇಳಿದೆ.

"ನೀವು ಇತ್ತೀಚೆಗೆ ಇಲ್ಲಿಗೆ ಬಂದೋರು.....ನಿಮಗೆ ಹಿಂದಿನದೆಲ್ಲಾ ಗೊತ್ತಿಲ್ಲ. ಮಾದೇಗೌಡ...ಎಂ.ಎಲ್.ಎ. ಆಗಿ ಬರೋದಕ್ಕೆ ಮುಂಚೆ.....ನಮ್ಮ ಕಾಳಮುದ್ದನ ದೊಡ್ಡಿಯಿಂದ ಹಿಡಿದು, ಮಳವಳ್ಳಿ ಅಂಚೆದೊಡ್ಡಿ ತನಕ ಒಂದೇ ಬೆಳೆ ಕಣಪ್ಪ ಆಯ್ತಿದ್ದುದು. ಐನ್ ಬೆಳೇನಲ್ಲಿ ಬತ್ತ ಬೆಳ್ಯೋತಿದ್ರೊ.....ಮುಂಗಾರ್‌ಎಟಕಿಸ್ಕೊಂಡು ಎಲ್ಲೊ ಕೆಲವರು ಕಡ್ಡಿ-ಕಾಳು ಚೆಲ್ಕೋತಿದ್ದರು......ಬೇಸ್ಗೇಲಿ ನೀರು ಕೊಡ್ತಿರಲಿಲ್ಲ" ಎನ್ನುತ್ತಿದ್ದಂತೆಯೇ, ನಾನು ತುಂಬಾ ಅಚ್ಚರಿಗೊಂಡು -

"ಈ ಭಾಗದಲ್ಲಿ ಆಗ ಹೆಚ್ಚಾಗಿ ಕಬ್ಬು ಬೆಳೀತಿರಲಿಲ್ಲವೇ ?" ಎಂದು ಪ್ರಶ್ನಿಸಿದೆ.

"ಕಾಲುವೇಲಿ ನೀರ್ನೇ ಬುಡ್ತಿರಲಿಲ್ಲ ಅಂದ್ಮೇಲೆ.....ಕಬ್ಬನ್ನ ಎಲ್ಲಿ ಬೆಳೆಯೋಕೆ ಆಯ್ತಿತ್ತು!.... ಇನ್ನು ಹೇಳಿ.....ಆ ಸೂಳೆಕೆರೆ ಅಚ್ಚುಕಟ್ನಲ್ಲಿ ಬರೂ ಹಳ್ಳಿಗಳಲ್ಲಿ ಸುಮಾರಾಗಿ ಕಬ್ಬು ಬೆಳೀತಿದ್ರು. ಅಲ್ಲೂ ಹೆಚ್ಚಾಗಿ ಒಂದ್ ಬೆಳೆ ಬತ್ತ ಬೆಳ್ಕೊಂಡು..... ಇನ್ನೊಂದಕ್ಕೆ ಬೇಸ್ಗೇಲಿ ಕಾರ್ ರಾಗಿ ಹಾಕೂರು......ಆಗ ಕಬ್ಬು ಬೆಳೆದರೂ ತಾನೆ ಏನಪ್ಪ........ಅದ ಮಂಡ್ಯ ಸಕ್ಕರೆ ಫ್ಯಾಕ್ಟರಿಗೆ ಹೊಡಿಯೂವತ್ಗೆ ಬೋ ಎಕ್ಕಾಸ ಆಗೋದು."

"ಆಗ ಕಬ್ಬನ್ನು ಹೆಂಗೆ ಸಾಗಿಸ್ತಿದ್ದರು" ಎಂದು ಮತ್ತೆ ಪ್ರಶ್ನಿಸಿದೆ.

"ಇಲ್ಲಿ ಕಡಕೆರೆ ಹತ್ರ ಏಬಿಜ್ ಇತ್ತು. ಅಲ್ಲಿಗೆ ತಕೊಂಡೋಗಿ ಹಾಕೂರು.....ಇನ್ನೂ ಕೆಲವರು ಎತ್ತಿನ ಗಾಡೀಲಿ ತುಂಬ್ಕೊಂಡು ಮಂಡ್ಯಕ್ಕೆ ಹೊಯ್ತಿದ್ದರು. ರೈತರ ಕಷ್ಟವನ್ನೆಲ್ಲಾ ನಮ್ಮ ಗೌಡ ಕಣ್ಣಾರ ಕಂಡಿದ್ನಲ್ಲ......ಎಂ.ಎಲ್.ಎ. ಆದ ಪ್ರಾರಂಭದಲ್ಲೆ....ಈ ಸುತ್ತಮುತ್ತ ನೂರಾರು ಹಳ್ಳಿಗಳಿಗೆ ಬಂದು, ರೈತರ್ನೆಲ್ಲಾ ಅಲ್ಲಲ್ಲಿ ಕಲೆ ಹಾಕಿ -

"ನೋಡಿ ....ನೀವೆಲ್ಲಾ ವರ್ಷದಲ್ಲಿ ಸತಾ ಮುನ್ನೂರು ಕಾಲವೂ ಕಬ್ಬನ್ನು ಬೆಳೆಯೂವಂಗೆ ಬೇಸ್ಗೇಲಿ ನಾನು ನೀರು ಬುಡಿಸ್ತೀನಿ. ಕಾಳಮುದ್ದನ ದೊಡ್ಡೀಲಿ ನಮ್ಮ ರೈತರ ಸಹಕಾರದಿಂದಲೇ ಒಂದು ಸಕ್ಕರೆ ಫ್ಯಾಕ್ಟರಿ ಕಟ್ಟೋಣ. ನೀವೆಲ್ಲಾ ನಿಂನಿಮ್ಮ ಕೈಲಾದಷ್ಟು ದುಡ್ಡು ಕೊಟ್ಟು....ಷೇರುಗಳನ್ನು ಕೊಂಡ್ಕೊಳ್ಳಿ" ಅಂತ ನಾಲ್ಕಾರು ವರ್ಷ ಹೆಣಗಾಡ್ದ.

ಆದರೆ ರೈತರ ತಾವು ದುಡ್ಡು ಹುಟ್ಟಲಿಲ್ಲ.....ಹಂಗಾದ್ರು ಇಲ್ಲೊಂದು ಸಕ್ಕರೆ ಫ್ಯಾಕ್ಟರಿ ಮಾಡ್ಬೇಕು ಅನ್ನೊ ಉದ್ದೇಶ ಕೈ ಬಿಡ್ದೆ......ಇಲ್ಲಿಂದ ದಿಲ್ಲಿ ತನಕ ಏನೇನೋ ಹೋರಾಟ ಕೊಟ್ಟು ......ಇಲ್ಲಿ ಸಕ್ಕರೆ ಫ್ಯಾಕ್ಟರಿ ಬರೂವಂಗೆ ಮಾಡ್ದ. ಫ್ಯಾಕ್ಟರಿ ಕಟ್ಟಿ ಮುಗಿಸಿ, ಕಬ್ಬು ಅರೆಯೋವತ್ಗೆ ನೋಡಪ್ಪ .....ದಕ್ಕಡಿಸಿಕೆಯಾಗಿ ನಿಂತ್ಕೊಂಡು......ಸರ್ಕಾರದ ಜೊತೇಲಿ ವ್ಯವಹಾರ ಮಾಡಿ, ಬ್ಯಾಸ್ಗೇಲೂ ನೀರು ಕೊಡುವಂಗೆ ಆರ್ಡರ್ ಮಾಡಿಸಿ...... ನೀರ್ ಬುಡೂ ಇಂಜಿನಿಯರ್‌ಗಳನ್ನು ಹಿಡ್ಕೊಂಡು.......ಇತ್ತಗೆಲ್ಲಾ ಕಬ್ಬು ಬೆಳೆಯೂಕೆ ವರ್ಷ ಪೂರ್ತಿ ನೀರ್ ಕೊಡಿಸ್ದ.......ಅತ್ತಗೆ ಹಿಟ್ಟನಹಳ್ಳಿ ಕೊಪ್ಪಲಿಂದ ಹಿಡಿದು ಅಂಚೆದೊಡ್ಡಿ ತನಕ ಇರೂ ಕಾಲುವೆಗಳಲ್ಲೂ ಬ್ಯಾಸ್ಗೇಲೆಲ್ಲಾ ನೀರು ಹರಿಯೂವಂಗೆ ಮಾಡ್ಸಿ.......ಎಲ್ಲಾ ಕಡೆ ನಮ್ಮ ರೈತರು ಬೇಕಾದಂಗೆ ಕಬ್ಬು ಬೆಳೆದು, ಫ್ಯಾಕ್ಟರಿಗೆ ಹೊಡೆದು, ನಾಲ್ಕು ಕಾಸು ಕಾಣುವಂಗೆ ಮಾಡ್ದ." ಎಂದು ಸಾಕಷ್ಟು ಸುದೀರ್ಘವಾಗಿಯೇ ವಿವರಿಸಿದರು.

ಹೀಗೆ ಮಾತನಾಡುತ್ತಾ ಭಾರತೀ ವಿದ್ಯಾ ಸಂಸ್ಥೆಯ ಮುಂದಿನ ರಸ್ತೆಗೆ ಬಂದೆವು. ನಮ್ಮ ವಿದ್ಯಾಸಂಸ್ಥೆಯ ಕಡೆಗೆ ಅವರು ಕೈ ತೋರಿಸುತ್ತಾ -

"ನೋಡಿ ಮೇಷ್ಟ್ರೆ.......ಈಗ ನೀವೆಲ್ಲಾ ಕೆಲಸದಲ್ಲಿ ಇದ್ದೀರಲ್ಲ.......ಈ ಜಾಗ ಮೊದಲು ಏನಾಗಿತ್ತು ಗೊತ್ತೆ? .......ಇದೆಲ್ಲಾ ಮಸಾಣ ಕಾಡು.....ಇಲ್ಲಿ ಹೆಣ ಬೇಯ್ತಿದ್ದೊ......ನಾವು ಚಿಕ್ಕೋರಾಗಿದ್ದಾಗ ಮದ್ದೀನದೊತ್ತು ಇಲ್ಲಿಗೆ ಕುರಿ ಬುಟ್ಕೊಂಡು ಬರೋಕೆ ಹೆದರ್ಕೊತಿದ್ದೊ.....ಅಂಥಾ ಜಾಗದಲ್ಲಿ.....ಇಂಥಾ ಕಾಲೇಜು ಕಟ್ಟಿ.....ನಮ್ಮ ಹಳ್ಳಿ ಹೈಕ್ಳು ದೊಡ್ಡದೊಡ್ಡ ವಿದ್ಯಾವಂತರಾಗುವಂಗೆ ಮಾಡ್ದ...ಈಗ ಈ ಸುತ್ತಮುತ್ತ ಹತ್ತಾರು ಹಳ್ಳಿ ಹೆಣ್ಮಕ್ಳು ತಾನೆ ಯಾಪಾಟಿ ಬತ್ತಾವೆ ವಿದ್ಯೆ ಕಲಿಯೋಕೆ !" ಎಂದು ಅಚ್ಚರಿಯನ್ನು ವ್ಯಕ್ತಪಡಿಸಿದರು....ಕ್ಷಣ ಕಾಲ ಮಾತಿಲ್ಲದೆ ಇಬ್ಬರು ಮುನ್ನಡೆಯುತ್ತಿದ್ದೆವು. ಮತ್ತೆ ಅವರೇ ಮಾತನ್ನು ಮುಂದುವರಿಸಿ -

"ಈಗೋರು ಕೆಲವರು...ಹಿಂದೆ ಮುಂದೆ ತಿಳಿಯದೆ ಇರೋರು....'ನಮಗೇನು ಮಾಡಿದ್ದನು ಮಾದೇಗೌಡ ?' ...'ನಮಗೇನು ಕೊಟ್ಟಿದ್ದನು ಮಾದೇಗೌಡ ?' ಅಂತ ಬಾಯಿಗೆ ಬಂದಂಗೆ ಆಡ್ತಾರೆ.....ನಮ್ಮ ಮಾದೇಗೌಡ ಒಬ್ಬೊಬ್ಬರಿಗೆ ಅಂತ ಯಾವುದನ್ನೂ ಮಾಡಲಿಲ್ಲ...ಎಲ್ಲರಿಗೂ ಎಲ್ಲಾ ಕಾಲಕ್ಕೂ ಒಳ್ಳೇದಾಗುವಂಥ ಕೆಲಸಗಳನ್ನು ಮಾಡವ್ನೆ" ಎಂದು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾ.....ಮನೆಯತ್ತ ನಡೆದರು.

ಕನ್ನಡ ನಾಡಿನ ಸುಪ್ರಸಿದ್ಧ ಅಂಕಣಕಾರರಲ್ಲಿ ಒಬ್ಬರಾದ ಎಚ್ಚೆಸ್ಕೆ (ಶ್ರೀ ಎಚ್.ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್) ಅವರೊಡನೆ ಒಮ್ಮೆ ನಾನು ಮಾತನಾಡುತ್ತಾ....ಕಾಳಮುದ್ದನ ದೊಡ್ಡಿಯಂಥ ಹಳ್ಳಿಗಾಡಿನ ಪರಿಸರದಲ್ಲಿ ಜಿ.ಮಾದೇಗೌಡರು ಮಾಡಿರುವ ಜನಪರವಾದ ಕಾರ್ಯಗಳನ್ನು ಹೇಳಿದಾಗ, ಅವರು ಒಂದು ಐತಿಹಾಸಿಕ ಘಟನೆಯನ್ನು ವಿವರಿಸಿದರು.

"ವಿಶ್ವದ ಎರಡನೆಯ ಮಹಾಯುದ್ಧದ ನಂತರ....1945ರಲ್ಲಿ ಇಂಗ್ಲೆಂಡಿನಲ್ಲಿ ಅಧಿಕಾರಕ್ಕೆ

ಬಂದ ಲೇಬರ್ ಪಕ್ಷದ ಸರ್ಕಾರವು.....ದೇಶದ ಪ್ರಜೆಗಳ ಸರ್ವತೋಮುಖ ಪ್ರಗತಿಗಾಗಿ ಯೋಜನೆಯನ್ನು ರೂಪಿಸುವುದಕ್ಕಾಗಿ, ಲಾರ್ಡ್ ಬೆವರಿಜ್ ಎಂಬ ಯೋಜನಾ ತಜ್ಞನ ಬಳಿ ಸಲಹೆಗಳನ್ನು ಕೇಳಿತು.

ಆಗ ಆತ....ಜನ ಸಮುದಾಯವನ್ನು ಭೀಕರವಾಗಿ ಕಾಡುತ್ತಿರುವ ಬಡತನ, ಅಜ್ಞಾನ, ನಿರುದ್ಯೋಗ, ವ್ಯಾಧಿ ಮತ್ತು ದೈನ್ಯತೆ ಎಂಬ ಐದು ಬಗೆಯ ಸಾಮಾಜಿಕ ಅನಿಷ್ಟಗಳನ್ನು (Social Evils) ತೊಲಗಿಸುವಂಥ ಕಾರ್ಯಕ್ರಮಗಳನ್ನು ರೂಪಿಸಿಕೊಂಡು......ಉತ್ತಮ ಶಿಕ್ಷಣವನ್ನು ನೀಡುವುದರ ಮೂಲಕ ಜನರಲ್ಲಿನ ಅಜ್ಞಾನವನ್ನು ಮೊದಲು ಹೋಗಲಾಡಿಸಬೇಕು.....ದುಡಿಯುವ ಕೈಗಳಿಗೆ ಉದ್ಯೋಗದ ಅವಕಾಶಗಳನ್ನು ಅಧಿಕಗೊಳಿಸಿ, ನಿರುದ್ಯೋಗವನ್ನು ನಿವಾರಿಸಬೇಕು.....ಆಗ ಲಭಿಸುವ ದುಡಿಮೆಯ ಉತ್ಪನ್ನಗಳ ಹೆಚ್ಚಳದಿಂದ ಆರ್ಥಿಕ ಪ್ರಗತಿಯುಂಟಾಗಿ, ಜನಸಮುದಾಯದ ಬದುಕಿನಲ್ಲಿರುವ ಬಡತನ, ವ್ಯಾಧಿ ಮತ್ತು ದೈನ್ಯತೆ ತಾವಾಗಿಯೇ ತೊಲಗುತ್ತವೆ. ಇಂತಹ ಜನಕಲ್ಯಾಣಕ್ಕಾಗಿ ಪಂಚವಾರ್ಷಿಕ ಯೋಜನೆಗಳನ್ನು ಸರ್ಕಾರ ಹಾಕಿಕೊಳ್ಳಬೇಕೆಂದು ಸಲಹೆಯನ್ನು ನೀಡಿದನು.

ದೂರದೃಷ್ಟಿಯುಳ್ಳ ಯಾವುದೇ ರಾಜಕಾರಣಿಯು ಜನಸಮುದಾಯದ ಹಿತಕ್ಕಾಗಿ.....ಇಂತಹ ರಚನಾತ್ಮಕವಾದ ಯೋಜನೆಗಳನ್ನು ಹಾಕಿಕೊಂಡು.....ಶ್ರದ್ಧೆ ಮತ್ತು ಪ್ರಾಮಾಣಿಕತನದಿಂದ ನಿರ್ದಿಷ್ಟ ಅವಧಿಯಲ್ಲಿ ಕಾರ್ಯರೂಪಕ್ಕೆ ತರುತ್ತಾನೆ. ಮಂಡ್ಯದ ಜಿ.ಮಾದೇಗೌಡರು ಹಳ್ಳಿಗಾಡಿನ ಇಂಥ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದು .....ಹಳ್ಳಿಗರು ನಿರಂತರವಾಗಿ ಅರಿವನ್ನು ಪಡೆಯಲು ಅನುಕೂಲವಾಗುವಂಥ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿ ಮತ್ತು ಕ್ರಿಯಾಶೀಲರಾಗಿ ದುಡಿಯುವ ಅವಕಾಶಗಳನ್ನು ಕಲ್ಪಿಸಿ ಕೊಡುವಂಥ ಬೃಹತ್ ಸಕ್ಕರೆ ಕಾರ್ಖಾನೆಯು ಸ್ಥಾಪನೆಗೊಳ್ಳಲು ಕಾರಣಕರ್ತರಾಗಿ ಬಹಳ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ" ಎಂದು ಅಭಿಪ್ರಾಯಪಟ್ಟರು.

ಹಳ್ಳಿಯ ರೈತರೊಬ್ಬರು ಅಂದು ಹೇಳಿದ ರಾಮಾಯಣದ ಉಪಮೆಯು.... ಜನ ಸಮುದಾಯವು ಚೈತನ್ಯ ಪೂರ್ಣವಾದ ಅರಿವನ್ನು ಪಡೆದು, ಕ್ರಿಯಾಶೀಲ ಬದುಕನ್ನು ನಡೆಸುತ್ತಿರುವ ರೀತಿಯನ್ನು ಅರ್ಥಪೂರ್ಣವಾಗಿ ಧ್ವನಿಸುತ್ತಿತ್ತು.



## ಶ್ರೀ ಜಿ. ಮಾದೇಗೌಡರ ಜೀವನದ ಸಂಕ್ಷಿಪ್ತ ವಿವರಗಳು

| | | |
|---|---|---|
| ಹುಟ್ಟಿದ ಊರು | : | ಗುರುದೇವರಹಳ್ಳಿ,<br>ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ. |
| ಹುಟ್ಟಿದ ದಿನಾಂಕ | : | 10 ಜುಲೈ 1928<br>(ಇದು ಖಚಿತವಾದ ದಿನಾಂಕವಲ್ಲ. ಜಿ.ಮಾದೇಗೌಡರ ಅಣ್ಣನವರು ಶಾಲೆಗೆ ಸೇರಿಸುವಾಗ ನೀಡಿದ ಒಂದು ದಿನಾಂಕ) |
| ತಂದೆ | : | ಶ್ರೀ ಪುಟ್ಟೇಗೌಡ |
| ತಾಯಿ | : | ಶ್ರೀಮತಿ ಕಾಳಮ್ಮ |
| ಪತ್ನಿ | : | ಶ್ರೀಮತಿ ಜೆ. ಪಿ. ಪದ್ಮ |
| ಮಕ್ಕಳು | : | ಇಬ್ಬರು ಹೆಣ್ಣು ಮತ್ತು ಇಬ್ಬರು ಗಂಡು ಮಕ್ಕಳು |
| ವಿದ್ಯಾಭ್ಯಾಸ | : | ಬಿ.ಎ., ಬಿ.ಎಲ್., |

## ಸಾರ್ವಜನಿಕ ಕ್ಷೇತ್ರ

| | | |
|---|---|---|
| 1961 | : | ಮದ್ದೂರು ತಾಲ್ಲೂಕು ಬೋರ್ಡಿನ ಸದಸ್ಯರು |
| 1962-67 | : | ಕಿರುಗಾವಲು ಮತ್ತು ಮಳವಳ್ಳಿ ಜಂಟಿಕ್ಷೇತ್ರದ ವಿಧಾನಸಭಾ ಸದಸ್ಯರು |
| 1967-89 | : | ಕಿರುಗಾವಲು ಕ್ಷೇತ್ರದ ವಿಧಾನಸಭಾ ಸದಸ್ಯರು |
| 1989-96 | : | ಮಂಡ್ಯ ಕ್ಷೇತ್ರದ ಲೋಕಸಭಾ ಸದಸ್ಯರು |
| 1969-71 | : | ಮೈಷುಗರ್ ಕಂಪನಿಯ ಅಧ್ಯಕ್ಷರು |
| 1980-83 | : | ಕರ್ನಾಟಕ ಸರ್ಕಾರದ ಗಣಿ, ಭೂ ವಿಜ್ಞಾನ ಮತ್ತು ಅರಣ್ಯ ಸಚಿವರು |

# ಭಾರತೀ

ಹೆಚ್.ಎಸ್.ನರಸಿಂಹ ಜೀಯರ್, ವಿದ್ಯಾಧಿಕಾರಿಗಳು

ಕಾನನದ ಮಧ್ಯದಲ್ಲಿ ಸೌರಭವ ತಾ ಸೂಸಿ।
ಮೆರೆವ ಮಲ್ಲಿಗೆ ತೆರದಿ ಭವನ ಮೈಚಾಚಿ।
ನಿಂತಿಹುದು ದೊಡ್ಡಿಯಲಿ ಗ್ರಾಮ ಮಕ್ಕಳಿಗಾಗಿ ॥

ಎಷ್ಟು ಸುಂದರವು ಈ ಭವ್ಯ ಭವನ
ಸುತ್ತಲಿನ ಬಯಲೊಳಗೆ ಫಲಭರಿತ ವನ।
ತಾ ಸೆಳೆಯುತಿದೆ ನೋಡುವರ ಕಣ್ಮನ
ಇದನೆ 'ಭಾರತಿ ವಿದ್ಯಾಸಂಸ್ಥೆ' ಎಂಬರು ಜನ ॥

ಸಾರ್ಥಕವು ದಾನಿಗಳೆ ನೀವಿತ್ತ ಧನ
ವಂದಿಸುತ ಕಲಿಯುತಿದೆ ಮಕ್ಕಳ ಮನ।
ಗುರುವರ್ಗ ತುಂಬುತಿದೆ ಶಿಷ್ಯರಲಿ ಜ್ಞಾನ
ಇದು ಈ ಯುಗದ ಗುರುಕುಲವು - ಇಲ್ಲ ಅನುಮಾನ ॥

ಸುತ್ತಲಿನ ಮಕ್ಕಳಿಗೆ ಹಿಂದೆ ಪದವಿ ಅಲಭ್ಯ
ಈ ಸಂಸ್ಥೆಯಿಂದಲಿ ಆಯ್ತು ಅಂಥಾ ಅಲಭ್ಯ ಲಭ್ಯ
ಊಟ ವಸತಿಗಳಂತು ಎಲ್ಲರಿಗೂ ಲಭ್ಯ
ಈಗಂತು ದೊರೆಯುತಿದೆ ಮಕ್ಕಳಿಗೆ ಎಲ್ಲ ಸೌಲಭ್ಯ ॥

ಶಿಕ್ಷಣ ಕ್ಷೇತ್ರದಲ್ಲಿ ಇದೊಂದು ಧೃವತಾರೆ
ಬೆಳೆಯಲೀ ಸಂಸ್ಥೆ ಇಲ್ಲದೆಯೆ ಮೇರೆ ॥
ಜನಮನವು ನಮಿಸುತಿದೆ ಅಹೋರಾತ್ರಿ
ಈಗ ಇದೊಂದು "ಮರಿ ಮಾನಸಗಂಗೋತ್ರಿ" ॥

ವಿಶ್ವದ ಎರಡನೆಯ ಮಹಾಯುದ್ಧದ ನಂತರ......1945ರಲ್ಲಿ ಇಂಗ್ಲೆಂಡಿನಲ್ಲಿ ಅಧಿಕಾರಕ್ಕೆ ಬಂದ ಲೇಬರ್‌ಪಕ್ಷದ ಸರ್ಕಾರವು ಪ್ರಜೆಗಳ ಸರ್ವತೋಮುಖ ಪ್ರಗತಿಗಾಗಿ ಯೋಜನೆಯನ್ನು ರೂಪಿಸುವುದಕ್ಕಾಗಿ ಲಾರ್ಡ್ ಬೆವರಿಜ್ ಎಂಬ ಯೋಜನಾ ತಜ್ಞನ ಬಳಿ ಸಲಹೆಗಳನ್ನು ಕೇಳಿತು.

ಆಗ ಆತ......ಜನ ಸಮುದಾಯವನ್ನು ಭೀಕರವಾಗಿ ಕಾಡುತ್ತಿರುವ ಬಡತನ, ಅಜ್ಞಾನ, ನಿರುದ್ಯೋಗ, ವ್ಯಾಧಿ ಮತ್ತು ದೈನ್ಯತೆ ಎಂಬ ಐದು ಬಗೆಯ ಸಾಮಾಜಿಕ ಅನಿಷ್ಟಗಳನ್ನು (Social Evils) ತೊಲಗಿಸುವಂಥ ಕಾರ್ಯಕ್ರಮಗಳನ್ನು ರೂಪಿಸಿಕೊಂಡು.....ಉತ್ತಮ ಶಿಕ್ಷಣವನ್ನು ನೀಡುವುದರ ಮೂಲಕ ಜನರಲ್ಲಿ ಅಜ್ಞಾನವನ್ನು ಮೊದಲು ಹೋಗಲಾಡಿಸಬೇಕು......ದುಡಿಯುವ ಕೈಗಳಿಗೆ ಉದ್ಯೋಗದ ಅವಕಾಶಗಳನ್ನು ಅಧಿಕಗೊಳಿಸಿ, ನಿರುದ್ಯೋಗವನ್ನು ನಿವಾರಿಸಬೇಕು.......ಆಗ ಲಭಿಸುವ ದುಡಿಮೆಯ ಉತ್ಪನ್ನಗಳ ಹೆಚ್ಚಳದಿಂದ ಆರ್ಥಿಕ ಪ್ರಗತಿಯುಂಟಾಗಿ, ಜನಸಮುದಾಯದ ಬದುಕಿನಲ್ಲಿರುವ ಬಡತನ, ವ್ಯಾಧಿ ಮತ್ತು ದೈನ್ಯತೆ ತಾವಾಗಿಯೇ ತೊಲಗುತ್ತವೆ. ಇಂತಹ ಜನಕಲ್ಯಾಣಕ್ಕಾಗಿ ಪಂಚ ವಾರ್ಷಿಕ ಯೋಜನೆಗಳನ್ನು ಸರ್ಕಾರ ಹಾಕಿಕೊಳ್ಳಬೇಕೆಂದು ಸಲಹೆಯನ್ನು ನೀಡಿದನು.

ದೂರದೃಷ್ಟಿಯುಳ್ಳ ಯಾವುದೇ ರಾಜಕಾರಣಿಯು ಜನಸಮುದಾಯದ ಹಿತಕ್ಕಾಗಿ ಇಂತಹ ರಚನಾತ್ಮಕವಾದ ಯೋಜನೆಗಳನ್ನು ಹಾಕಿಕೊಂಡು, ಶ್ರದ್ಧೆ ಮತ್ತು ಪ್ರಾಮಾಣಿಕತನದಿಂದ ನಿರ್ದಿಷ್ಟ ಅವಧಿಯಲ್ಲಿ ಕಾರ್ಯರೂಪಕ್ಕೆ ತರುತ್ತಾನೆ. ಮಂಡ್ಯದ ಶ್ರೀ ಜಿ.ಮಾದೇಗೌಡರು ಹಳ್ಳಿಗಾಡಿನಲ್ಲಿ ಇಂತಹ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತಂದು ಹಳ್ಳಿಗರು ನಿರಂತರವಾದ ಅರಿವನ್ನು ಪಡೆಯಲು ಅನುಕೂಲವಾಗುವಂಥ ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿ ಮತ್ತು ಕ್ರಿಯಾಶೀಲರಾಗಿ ದುಡಿಯುವ ಅವಕಾಶಗಳನ್ನು ಕಲ್ಪಿಸಿಕೊಡುವಂಥ ಬೃಹತ್‌ಸಕ್ಕರೆ ಕಾರ್ಖಾನೆಯು ಸ್ಥಾಪನೆಗೊಳ್ಳಲು ಕಾರಣಕರ್ತರಾಗಿ, ಬಹಳ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ.

- *ಎಚ್ಚೆಸ್ಕೆ*

(ಶ್ರೀ ಎಚ್.ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್)

ಕನ್ನಡ ನಾಡಿನ ಸುಪ್ರಸಿದ್ಧ ಅಂಕಣಕಾರರು.